ನೂರ ಆರನೆಯ ಪ್ರಕಟಣೆ:

# ಶ್ರೇಷ್ಠ ಪುಸ್ತಕೋದ್ಯಮಿ:
# ಮ. ಗೋವಿಂದರಾವ್

ಸಂಪಾದಕ: ಶ್ರೀನಿವಾಸ ಹಾವನೂರ

ಸಾಹಿತ್ಯ ಭಂಡಾರ
ಜಂಗಮಮೇಸ್ತ್ರಿ ಗಲ್ಲಿ, ಬಳೇಪೇಟೆ
ಬೆಂಗಳೂರು: ೫೬೦ ೦೫೩

**ಸಾಹಿತ್ಯ ಭಂಡಾರದ ಪ್ರಕಾಶನ**

ಜಂಗಮಮೇಸ್ತ್ರಿ ಗಲ್ಲಿ, ಬಳೇಪೇಟೆ
*ಬೆಂಗಳೂರು: ೫೬೦ ೦೫೩*
ದೂರವಾಣಿ: ೨೮೭ ೭೬೧೮

ಮೊದಲ ಮುದ್ರಣ: ೧೯೯೬

ಮುಖಚಿತ್ರ: ಚಂದ್ರನಾಥ ಆಚಾರ್ಯ

ಅಕ್ಷರ: ಮಧುರ ಡಿ.ಟಿ.ಪಿ. ಸಿಸ್ಟಮ್ಸ್, ಅರಳೇಪೇಟೆ, ಬೆಂಗಳೂರು: ೫೩
ಮುದ್ರಣ: ಕ್ರೋಮೋಗ್ರಾಫಿಕ್ಸ್ ಆಫ್‌ಸೆಟ್, ಆಡುಗೋಡಿ, ಬೆಂಗಳೂರು: ೩೦

# ಪ್ರಾಸ್ತಾವಿಕ

ಮಂ. ಗೋವಿಂದರಾಯರು ತೀರಿ ಹೋಗಿ ಕೆಲವು ತಿಂಗಳಾದ ಮೇಲೆ ಅವರ ಬಗ್ಗೆ ಅಥವಾ ಅವರ ನೆನಪು ಉಳಿಯುವಂತೆ ಯಾರಾದರೂ ಸ್ಮರಣ ಗ್ರಂಥವನ್ನು ತರುವವರಿದ್ದಾರೆಯೇ? ಎಂದು ಅವರ ಮಗ ರಾಜಾನನ್ನು ವಿಚಾರಿಸಿದೆ. 'ಹಾಗೆ ಇದುವರೆಗೆ ಯೋಚಿಸಿದುದಿಲ್ಲ. ನೀವೇ ಯಾಕೆ ಆ ಕೆಲಸ ಮಾಡಬಾರದು?' ಎಂದು ಕೇಳಿದರು. ಅವರ ಬಗೆಗಿನ ನನ್ನ ಆದರ ಭಾವವನ್ನು ವ್ಯಕ್ತಪಡಿಸಲು ಇದೊಂದು ಅವಕಾಶ ಎಂದು ಬಗೆದು, ಮರುಮಾತಿಲ್ಲದೆ ಒಪ್ಪಿಕೊಂಡೆ. ಅವರ ಸಂಪರ್ಕ ಬಂದವರಿಗೆ ಹಾಗೂ ಅವರ ಸಂಬಂಧಿಕರಿಗೆ ಪತ್ರ ಬರೆದದ್ದಾಯಿತು. ಯಾರೊಬ್ಬರೂ ನಿಷ್ಕ್ರಿಯರಾಗಿ ಉಳಿಯದೆ ಬರೆದು ಕಳಿಸಿದರು. ಇನ್ನೂ ಕೆಲವರು ಇವರನ್ನು ಕುರಿತು ಈಗಾಗಲೇ ತಾವು ಬರೆದದ್ದನ್ನು ಅವಶ್ಯವಾಗಿ, ಹೇಗೆ ಬೇಕೋ ಹಾಗೆ ಉಪಯೋಗಿಸಿಕೊಳ್ಳಿರಿ ಎಂದು ತಿಳಿಸಿದರು.

ಗೋವಿಂದರಾಯರ ಬದುಕು ಹಾಗೂ ಉದ್ಯಮ ಏಕಮುಖವಾದದ್ದು. ಅದರಲ್ಲಿ ಅವರು ತೋರಿದ ಪ್ರಾಮಾಣಿಕತೆ, ಸತ್ಯ ನಿಷ್ಠುರತೆ ಇವು ಸಾಮಾನ್ಯವಾಗಿ ಎಲ್ಲರ ಬರಹಗಳಲ್ಲಿ ಬರಬೇಕಾದದ್ದು ಸಹಜವೇ. ಆದ್ದರಿಂದ ಪುನರುಕ್ತಿಗಳನ್ನು ತೊರೆದು, ವಾಚನೀಯತೆಯನ್ನು ಕಾಯ್ದುಕೊಳ್ಳುವ ದೃಷ್ಟಿಯಿಂದ, ಅಲ್ಲಲ್ಲಿ ಕೆಲವು ಭಾಗಗಳನ್ನು ಕೈಬಿಡುವುದು ಅನಿವಾರ್ಯವಾಯಿತು. ಅದಕ್ಕಾಗಿ ಆ ಆ ಲೇಖಕರ ಕ್ಷಮೆ ಕೇಳುವೆ. ಹಾಗೆ ಕೈಬಿಟ್ಟಿದ್ದರಿಂದ, ಗೋವಿಂದರಾಯರ ಬಗ್ಗೆ ಅವರು ಗಳಿಸಿದ್ದ ಸದ್ಭಾವಕ್ಕೆ ಯಾವುದೇ ರೀತಿಯಲ್ಲಿ ಚ್ಯುತಿಯಾಗದು.

ಗೋವಿಂದರಾಯರ ಕಾರ್ಯದ ಮಹತ್ವ, ವಿಶೇಷತೆಗಳು ಸ್ಪಷ್ಟವಾಗಬೇಕಾದರೆ ಪುಸ್ತಕೋದ್ಯಮ ಬೆಳೆದು ಬಂದ ಬಗೆಯನ್ನು ಕೊಡುವುದು ಅವಶ್ಯವೆನಿಸಿತು. ಅದನ್ನು ಸೇರಿಸಲಾಗಿದೆ.

ಇದರ ಸಂಪಾದನೆಯಲ್ಲಿ ನನ್ನ ಜೊತೆ ಶ್ರೀ ಲಿಂಗರಾಜು ಅವರು ತುಂಬಾ ನಿಷ್ಠೆಯಿಂದ ನೆರವಾಗಿದ್ದಾರೆ. ಗೋವಿಂದರಾಯರ ಮಕ್ಕಳಿಂದ ಹಿನ್ನೆಲೆಯ ಸಹಾಯವೂ ಒದಗಿ ಬಂದಿತು.

– ಶ್ರೀನಿವಾಸ ಹಾವನೂರ

# ಪರಿವಿಡಿ

# ನನ್ನ ಆರಂಭ ಜೀವನ

-ಮಂ. ಗೋವಿಂದರಾವ್

*ಮಂ. ಗೋವಿಂದರಾಯರು ತಮ್ಮ ಕೊನೆಯ ದಿನಗಳಲ್ಲಿ ತಮ್ಮ ಜೀವಿತ ಹಾದು ಬಂದ ಕಥನವನ್ನು ಬರೆಯಬೇಕು ಅಂದುಕೊಂಡಿದ್ದರು-ಆದರೆ ಅದು ಪೂರ್ಣವಾಗಿ ಈಡೇರದೆ ಟಿಪ್ಪಣಿಗಳ ರೂಪದ ಕೆಲವು ವಿವರಗಳು ಮಾತ್ರ ಅವರಿಂದ ಲಭ್ಯವಾಗಿವೆ. ಈ ಟಿಪ್ಪಣಿಗಳನ್ನು ಗೋವಿಂದರಾಯರ ಅಳಿಯ ಡ್ಯಾನ್ ಯಂಗ್ ಅವರು ಇಂಗ್ಲಿಷ್‌ನಲ್ಲಿ ದಾಖಲಿಸಿಕೊಂಡಿದ್ದಾರೆ. ಇದರ ಸರಳ ಕನ್ನಡ ರೂಪವನ್ನು ಇಲ್ಲಿ ನೀಡಲಾಗಿದೆ.*



ಈಗಿನ ಮೂಡಬಿದರೆ ತಾಲೂಕಿನ ಮಂಜನಬೈಲು ನಮ್ಮ ಪೂರ್ವಿಕರು ನೆಲೆಸಿದ್ದ ತಾಣ. ನನ್ನ ತಂದೆ ಲಕ್ಷ್ಮಣರಾವ್. ಇವರು ಮತ್ತು ರಾಮರಾವ್ ಅವಳಿ ಮಕ್ಕಳು. ನಾನು ೧೯-೨-೧೯೦೭ರಂದು ಮುಟ್ಟಿಕಲ್‌ನಲ್ಲಿ ಹುಟ್ಟಿದವನು. ಈ ಊರು ಮಂಜನ ಬೈಲುವಿನಿಂದ ಆರೇಳು ಫರ್ಲಾಂಗ್‌ಗಳ ದೂರದಲ್ಲಿ ಇದೆ. ಇಲ್ಲಿನ ಮನೆಗಳು ಹೀಗೆಯೇ; ಕಾಡು ಹಾಗೂ ಸಾಗುವಳಿ ಜಮೀನಿನ ಮಧ್ಯೆ ಇರೋ ಅಂಥವು. ನಮ್ಮ ಕುಲದೇವತೆಯ ದೇವಸ್ಥಾನ ಇಲ್ಲಿನ ಬಡಗಮಿಜಾರು ಗ್ರಾಮದಲ್ಲಿತ್ತು.

ನಮಗೆ ಮಂಜನಬೈಲಿನಲ್ಲಿ ಸ್ವಂತ ಮನೆ ಇರಲಿಲ್ಲ. ತಾಯಿಯ ತಂದೆ, ಅಂದರೆ ಅಜ್ಜನವ ರಾದ ಕೃಷ್ಣಪ್ಪನವರ ಮನೆಯಲ್ಲಿ ವಾಸವಾಗಿದ್ದೆವು. ಈ ಮನೆಯಲ್ಲಿ ವಾಸಕ್ಕೆ ಮಾತ್ರ ಅವಕಾಶ ಇತ್ತು. ಭೂಮಿ ಉಳೋದಕ್ಕೆ ಅವಕಾಶ ಇರಲಿಲ್ಲ. ನನ್ನ ಹಾಗೆಯೇ ಅಕ್ಕ ರುಕ್ಮಿಣಿ ಕೂಡ ಮುಟ್ಟಿಕಲ್‌ನಲ್ಲಿ ಹುಟ್ಟಿದಳು. ಉಳಿದ ಇಬ್ಬರು ತಂಗಿಯರು ಹಾಗೂ ಒಬ್ಬ ತಮ್ಮ ಮಂಜನಬೈಲಿನಲ್ಲಿ ಹುಟ್ಟಿದರು. ಮಂಜನಬೈಲಿಗೆ ಬಂದಾಗ ನನಗೆ ಆರು ವರ್ಷ. ಹನ್ನೆರಡನೇ ವರ್ಷದಲ್ಲಿದ್ದ ಅಕ್ಕ ರುಕ್ಮಿಣಿಯ ಮದುವೆ ೧೯೧೨ನೇ ಇಸವಿಯಲ್ಲಿ ನಡೆಯಿತು. ಅವಳನ್ನು ಇಲ್ಲಿಗೆ ಒಂದೂವರೆ ಮೈಲಿ ದೂರದ ಮಂಗೇಬೆಟ್ಟಿಗೆ ಕೊಟ್ಟಿತ್ತು. ಈಕೆಯ ಗಂಡ ಗೋವಿಂದಪ್ಪ ಧಾರವಾಡದಲ್ಲಿ ಒಂದು ಹೋಟೆಲ್ ನಡೆಸುತ್ತಿದ್ದರು. ಇದು ಆಗ ತುಂಬಾ ಹೆಸರು ಮಾಡಿತ್ತು. ಸರ್ಕಾರಿ ನೌಕರಿಯಲ್ಲಿದ್ದವರು, ಮಾಸ್ತರುಗಳು ಇಲ್ಲಿಗೆ ಊಟಕ್ಕೆ ಬರುತ್ತಿದ್ದರು. ಆಗ ತಿಂಗಳಿಗೆ ಎಂಟು ರೂಪಾಯಿ ನಿಗದಿ ಮಾಡಿದ್ದರು; ಒಂದು ಊಟಕ್ಕೆ ೨೫ ಪೈಸೆ ಬೆಲೆ. ೧೯೧೫ರಲ್ಲಿ ರುಕ್ಮಿಣಿ ಅಲ್ಲಿಗೆ ಹೋಗಿ ಗಂಡನ ಜೊತೆ ನಿಂತಿದ್ದಳು.

ನಮ್ಮ ಪ್ರಾಂತ್ಯದಲ್ಲಿ ನೆಲೆಸಿದ್ದ ನಮ್ಮಂಥ ದೇಶಸ್ಥ ಕುಟುಂಬಗಳ ಬದುಕು ಆಗಿನ ದಿನಗಳಲ್ಲಿ ತೀರ ಕಷ್ಟದ್ದಾಗಿತ್ತು. ಕೆಲವು ಕುಟುಂಬಗಳವರು ಅಡಿಗೆ ವೃತ್ತಿಯನ್ನು ಅವಲಂಬಿಸಿದ್ದರು. ಆದರೆ

ಇದು ವರುಷವಿಡೀ ದೊರೆಯುವಂಥದಾಗಿರಲಿಲ್ಲ; ಕೆಲಸಕಾರ್ಯಗಳಲ್ಲಿ ಮಾತ್ರ ಸಾಂದರ್ಭಿಕ ವಾಗಿ ಸಿಗುವಂಥದಾಗಿತ್ತು. ಮದುವೆ ಅಥವಾ ಸಾವಿನ ಕಾರ್ಯಗಳಲ್ಲಿ ಊಟಕ್ಕೆ ಆಹ್ವಾನ ಬಂದಾಗ ಎಂಟು ಹತ್ತು ಮೈಲಿಗಳಾದರೂ ನಾವು ನಡೆದೇ ಹೋಗುತ್ತಿದ್ದೆವು. ಆಗ ವಾಹನಗಳ ಸೌಲಭ್ಯ ಹೇಳಿಕೊಳ್ಳುವ ಹಾಗೆ ಇರಲಿಲ್ಲ. ಊಟದ ಜೊತೆಯಲ್ಲಿ ದೊರೆಯುತ್ತಿದ್ದ ಅಲ್ಪದಕ್ಷಿಣೆ - ೧/೨ ಅಥವಾ ೧/೪ ಆಣೆಗೆ ಶಾಲೆಯ ಮಕ್ಕಳೂ ಕೂಡ ಶಾಲೆ ತಪ್ಪಿಸಿಕೊಂಡು ಹಿರಿಯರ ಜೊತೆ ಹೋಗುತ್ತಿದ್ದರು. ಆಗಿನ ನಮ್ಮ ಬಡತನ ಇಂಥ ಸ್ಥಿತಿಯನ್ನು ನಿರ್ಮಾಣ ಮಾಡಿತ್ತು.

ಇಂಥ ಪರಿಸರದ ನಡುವೆ ನಿಡ್ಡೋಡಿಯಲ್ಲಿ ೧೯೧೩ರಿಂದ ನಾನು ಪ್ರಾಥಮಿಕ ಶಿಕ್ಷಣವನ್ನು ತೀರ ಕಷ್ಟದಲ್ಲಿ ಕಳೆದೆ. ಮಳೆಗಾಲದಲ್ಲಿ ಬೆಟ್ಟದ ದಾರಿಯಲ್ಲಿ ನಡೆದುಹೋಗುವುದು ತುಂಬ ಕಷ್ಟದ್ದಾಗಿರುತ್ತಿತ್ತು. ಎರಡು ತಿಂಗಳುಗಳವರೆಗೆ ಮಳೆ ಧಾರಾಕಾರವಾಗಿ ಸುರಿಯುತ್ತಲೇ ಇರುತ್ತಿತ್ತು. ಬೆಳಗ್ಗೆ ೮ ಗಂಟೆಗೆ ಶಾಲೆಗೆ ಹೋದವರು ಮಧ್ಯಾಹ್ನ ೧೨-೩೦ಕ್ಕೆ ಮನೆಗೆ ಬಂದು ಮತ್ತೆ ೨ ಗಂಟೆಗೆ ಹೋಗಿ ಸಂಜೆ ೫ ಗಂಟೆಗೆ ಮನೆಗೆ ಮರಳಿ ಬರುತ್ತಿದ್ದೆವು. ಅರುವತ್ತರಿಂದ ಒಂದು ನೂರು ವಿದ್ಯಾರ್ಥಿಗಳವರೆಗೆ ಇದ್ದ ಶಾಲೆ ಏಕೋಪಾಧ್ಯಾಯರನ್ನು ಒಳಗೊಂಡಿತ್ತು.

ನಮ್ಮ ತಂದೆಯವರ ಕಡೆಯಿಂದ ನನಗೆ ಎಂಟು ಜನ ಅಜ್ಜಂದಿರು ಇದ್ದರು. ಇವರಲ್ಲಿ ಕೊನೆಯವರೇ ನನ್ನ ಖಾಸಾ ಅಜ್ಜ. ನಾನು ಇವರನ್ನು ಮಾತ್ರ ನೋಡಿದ್ದೆ. ಇವರು ಶ್ರೀಮಂತರ ಮನೆಗಳಿಗೆ ಅಡಿಗೆ ಕಾರ್ಯಗಳಿಗೆ ಹೋಗುತ್ತಿದ್ದರು. ೧೮೫೮ರ ಸುಮಾರಿನಲ್ಲಿ ಮುಂಡರಗಿಯಲ್ಲಿ ಒಬ್ಬ ಶ್ರೀಮಂತನ ಮನೆಯಲ್ಲಿ ಅಡಿಗೆ ಮಾಡಿ ಇವರು ತಿಂಗಳಿಗೆ ೩೦ ರೂಪಾಯಿಸಂತೆ ಸಂಪಾದಿಸಿದ್ದರಂತೆ. ಬ್ರಿಟಿಷ್ ಸೇನೆಯಲ್ಲಿದ್ದ ಆ ಶ್ರೀಮಂತರ ಹತ್ತಿರ ಸುಮಾರು ೧೦-೧೫ ವರ್ಷ ಕೆಲಸ ಮಾಡಿ ಆಗಿನ ದಿನಗಳಲ್ಲೇ ೬೦೦೦ದಷ್ಟು ಹಣ ಸಂಪಾದಿಸಿಕೊಂಡು ಮರಳಿದ್ದ ಈ ಅಜ್ಜನನ್ನು ಆಗ ಊರಿನಲ್ಲಿ ಎಲ್ಲರೂ ತುಂಬ ಬೆರಗಿನಿಂದ ನೋಡಿದ್ದರು. ಈ ಸಮಯಕ್ಕೆ ಮನೆತನದ ಆಸ್ತಿ ಭಾಗವಾಗಿ ಕುಟುಂಬಗಳ ವರಮಾನ ಕೂಡ ಪರಿಮಿತಕ್ಕೆ ಸಿಲುಕಿತ್ತು.

೧೯೧೮ರ ಮಾರ್ಚ್‌ವರೆಗೂ ನನ್ನ ವಿದ್ಯಾಭ್ಯಾಸ ನಿಡ್ಡೋಡಿಯಲ್ಲಿಯೇ ನಡೆಯಿತು. ಓದಿನಲ್ಲಿ ನಾನು ಹಿಂದೆ ಬೀಳದಂತಿದ್ದೆ. ಪ್ರಬಂಧ ಸ್ಪರ್ಧೆಗಳಲ್ಲಿ ಬಹುಮಾನಗಳನ್ನು ಕೂಡ ಪಡೆಯುತ್ತಿದ್ದೆ. ಆದರೂ ಈ ಶಾಲೆಯ ಓದು ಮುಗಿದ ಮೇಲೆ ಮುಂದಿನ ಓದಿಗೆ ಸಮೀಪದಲ್ಲಿ ಶಾಲೆಗಳಿಲ್ಲದೆ ಎಂಟೊಂಬತ್ತು ಮೈಲಿಗಳ ದೂರಕ್ಕೆ ನಡೆದು ಹೋಗಬೇಕಿದ್ದುದು ನನ್ನ ವಿದ್ಯಾಭ್ಯಾಸವನ್ನು ಆಗ ತಾಕಲಾಟಕ್ಕೆ ಸಿಲುಕಿಸಿತ್ತು. ಇದರ ಮರುವರುಷವೇ ೧೯೧೯ರಲ್ಲಿ ನನಗೆ ಉಪನಯನ ವಿಧಿ ಕೂಡ ನಡೆಯಿತು.

ನಮ್ಮ ಮನೆಯವರು ನನ್ನ ಮುಂದಿನ ಓದನ್ನು ಧಾರವಾಡದಲ್ಲಿ ಅಕ್ಕ ರುಕ್ಮಿಣಿಯ ಮನೆಯಲ್ಲಿ ಇದ್ದು ಮುಂದುವರಿಸಬಹುದು ಎಂದು ಆಲೋಚಿಸಿದರು. ಹೀಗಾಗಿ ನಾನು ಆಗ ಧಾರವಾಡಕ್ಕೆ ಹೋಗಿ ಸೇರಿದೆ.

ಆಗ ಧಾರವಾಡ ಸುಮಾರು ಇಪ್ಪತ್ತೈದು ಸಾವಿರ ಜನಸಂಖ್ಯೆಯನ್ನು ಒಳಗೊಂಡಿತ್ತು. ಹದಿನೆಂಟೋ, ಹತ್ತೊಂಬತ್ತೋ ಪ್ರಾಥಮಿಕ ಶಾಲೆಗಳು ಇಲ್ಲಿದ್ದವು. ಶಾಲೆಗೆ ಸೇರಲೆಂದು ನಾನು ಧಾರವಾಡಕ್ಕೆ ಬಂದಾಗ ಸೆಪ್ಟೆಂಬರ್ ತಿಂಗಳು, ವರ್ಷದ ಮಧ್ಯಕಾಲ. ಆದರೂ

ಅಕ್ಕ ಮತ್ತು ಭಾವ ಗೋವಿಂದಪ್ಪನವರ ಶಿಫಾರಸಿನಿಂದ ಶಾಲೆಯಲ್ಲಿ ಪ್ರವೇಶ ಸಿಕ್ಕಿತು. ಈ ಶಾಲೆಯ ಮಾಸ್ತರರು ಭಾವನ ಖಾನಾವಳಿಗೇ ಊಟಕ್ಕೆಂದು ಬರುತ್ತಿದ್ದರು.

ನನ್ನ ಹೆಸರಿಗೆ 'ಮಂಗಳೂರು' ಎಂದು ಸೇರಿಕೊಂಡದ್ದು ಇಲ್ಲಿಯೇ. ಮಂಜನಬೈಲಿನಿಂದ ತಂದ ದಾಖಲಾತಿ ಪತ್ರ–ಟಿ.ಸಿ.ಯಲ್ಲಿ–'ಮಂಜನಬೈಲು ಲಕ್ಷ್ಮಣಭಟ್ಟನ ಮಗ ಗೋವಿಂದಭಟ್ಟ' ಎಂದಿದ್ದುದನ್ನು ಹುಡುಗರು ಗೇಲಿ ಮಾಡುತ್ತ 'ಮಂಗನಬೈಲು' ಎಂದು ಕರೆಯುತ್ತ ಹೀಯಾಳಿಸುತ್ತಿದ್ದರು. ಈ ಬೇಸರ ತೊಡೆದುಕೊಳ್ಳಲು ಮಂಜನಬೈಲಿಗೆ ಬದಲಾಗಿ 'ಮಂಗಳೂರು' ಸೇರಿತು.*

ನಾಲ್ಕನೇ ತರಗತಿಗೆ ಸೇರಿದ ನನ್ನ ಹೆಸರನ್ನು ಜಿ.ಎಲ್. ಮಂಗಳೂರು ಎಂದೇ ನಮೂದಿಸಿದೆ. ೧೯೨೦ರ ಏಪ್ರಿಲ್‌ನಲ್ಲಿ ಕರ್ನಾಟಕ ಹೈಸ್ಕೂಲಿಗೆ ಸೇರಿಕೊಂಡೆ. ಈ ಶಾಲೆಯಲ್ಲಿ ನನ್ನ ಬಂಧುವಾದ ಗೋಪಾಲಕೃಷ್ಣರಾಯನೂ ಇದ್ದ, ನನಗಿಂತ ಎರಡು ವರ್ಷಗಳಷ್ಟು ಹಿರಿಯನಾಗಿದ್ದ ಇವನು ತರಗತಿಗಳಲ್ಲೂ ಎರಡು ವರ್ಷಗಳ ಅಂತರದಷ್ಟು ಮೇಲಿದ್ದ. ಇವನ ಒಡನಾಟದಿಂದ ನಾನು ಧಾರವಾಡದ ಸಾಂಸ್ಕೃತಿಕ ವಾತಾವರಣಕ್ಕೆ ಒಗ್ಗಿಕೊಳ್ಳಲು ಸಾಕಷ್ಟು ನೆರವಾಯಿತು. ೧೯೨೦ರಲ್ಲಿ ಈ ಭಾಗದ ನಾಲ್ಕು ಜಿಲ್ಲೆಗಳ ರಾಜಕೀಯ ಸಮ್ಮೇಳನವೊಂದು ಜರುಗಿತು. ಮೈಸೂರಿನ ನಿವೃತ್ತ ದಿವಾನ್ ವಿ.ಪಿ. ಮಾಧವರಾವ್ ಅವರು ಈ ಸಮ್ಮೇಳನದ ನೇತೃತ್ವ ವಹಿಸಿದ್ದರು. ಹುಡುಗರಾಗಿದ್ದ ನಾನು, ಗೋಪಾಲಕೃಷ್ಣರಾವ್ ಹೊರಗೆ ನಿಂತು ಇವರ ಮಾತುಗಳನ್ನು ಕೇಳಿದ್ದೆವು. ಇಂಥ ಒಂದೆರಡು ಸಮ್ಮೇಳನಗಳಲ್ಲಿ ಆಗ ಭಾಗವಹಿಸಿದ್ದು ಕರ್ನಾಟಕ ಮತ್ತು ಭಾರತದ ಅಂದಿನ ರಾಜಕೀಯ ಪರಿಸ್ಥಿತಿಗಳ ಬಗೆಗೆ ನನ್ನಲ್ಲಿ ಸಾಕಷ್ಟು ತಿಳಿವನ್ನು ಮೂಡಿಸಿತು. ೧೯೨೦ರ ಆಗಸ್ಟ್‌ನಲ್ಲಿ ಗಾಂಧೀಜಿ ಅವರು ಧಾರವಾಡಕ್ಕೂ ಬಂದಿದ್ದರು. ಗಾಂಧೀಜಿಯವರನ್ನು ನಾನು ಇದೇ ಮೊದಲ ಸಲ ನೋಡಿ ಅವರ ಮಾತುಗಳನ್ನೂ ಕೇಳಿದೆ.

ಗೋಪಾಲಕೃಷ್ಣರಾಯ ಆಗ ತಮ್ಮ ಸ್ನೇಹಿತರ ಜೊತೆ 'ಶಾಂತೇಶ ವಾಚನಾಲಯ' ಎಂಬ ಗ್ರಂಥಾಲಯವೊಂದನ್ನು ನಡೆಸುತ್ತಿದ್ದರು; ಶಾಂತಕವಿಗಳ ಹೆಸರಿನಲ್ಲಿ ಈ ಗ್ರಂಥಾಲಯ ಆರಂಭಗೊಂಡಿತ್ತು. ಆಗ ನಾನೂ ಕೂಡ ಗೋಪಾಲಕೃಷ್ಣರಾಯನ ಜೊತೆ ಈ ಕಾರ್ಯಕ್ಕಾಗಿ ಸೇರಿಕೊಂಡಿದ್ದೆ. ಈ ಗ್ರಂಥಾಲಯದಲ್ಲಿ ಕನ್ನಡ, ಇಂಗ್ಲಿಷ್ ಹಾಗೂ ಮರಾಠಿಯ ಸುಮಾರು ೨೦ ಪುಸ್ತಕಗಳಿದ್ದವು. ಇದನ್ನು ನಡೆಸಲು ಹಣ ಇರಲಿಲ್ಲ. ಸಂಜೆ ಐದೂವರೆಯ ನಂತರ ಅವರಿವರಿಂದ ದಿನಪತ್ರಿಕೆಗಳನ್ನು ಬೇಡಿ ತಂದು ಗ್ರಂಥಾಲಯಕ್ಕೆ ಸೇರಿಸುತ್ತಿದ್ದೆವು. ಪುಸ್ತಕಗಳಿಗಾಗಿಯೂ ನಾವು ಹಲವರ ಬಳಿ ಬೇಡಿಕೊಳ್ಳುತ್ತಿದ್ದೆವು.

ಕರ್ನಾಟಕ ಹೈಸ್ಕೂಲಿನಲ್ಲಿ ಇರುವಾಗ ನಾನು ಕ್ರಿಕೆಟ್ ಆಟ ಆಡುತ್ತಿದ್ದೆ. ಸಾರ್ವಜನಿಕ ಸಮಾರಂಭಗಳಿಗೆ ಹಾಜರಾಗುತ್ತಿದ್ದೆ. ೧೯೨೧ರಲ್ಲಿ ಧಾರವಾಡಕ್ಕೆ ದೇಶದ ಹಲವೆಡೆಗಳಿಂದ ಭಾಷಣಕ್ಕೆಂದು ಬರುತ್ತಿದ್ದವರ ಸಭೆಗಳಿಗೆಲ್ಲ ನಾನು ಹಾಜರಿರುತ್ತಿದ್ದೆ. ಚಕ್ರವರ್ತಿ ರಾಜಗೋಪಾಲಾಚಾರ್, ಪಂಡಿತ ನೆಹರೂ ಆಗ ಧಾರವಾಡಕ್ಕೆ ಬಂದಿದ್ದರು. ಹೀಗಾಗಿ ನಾನು ಭಾವನ ಹೋಟೆಲ್‌ಗೆ ತಡವಾಗಿ ಸುಮಾರು ಒಂಬತ್ತು ಗಂಟೆಯ ವೇಳೆಗೆ ತಲುಪುತ್ತಿದ್ದೆ. ಇದರಿಂದ

---

* *ತಾವು ಪ್ರಕಟಿಸಿದ ಮೊದಲ ಪುಸ್ತಕದಲ್ಲಿ ಗೋವಿಂದರಾಯರು ತಮ್ಮನ್ನು 'ಗೋ.ಲ. ಮಂಗಳೂರು' ಎಂದು ಕರೆದುಕೊಂಡಿದ್ದಾರೆ.*

ಭಾವ ಗೋವಿಂದಪ್ಪ ಕೋಪಗೊಳ್ಳುತ್ತಿದ್ದರು. ನಾನು ಸ್ವಾತಂತ್ರ್ಯ ಚಳುವಳಿಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದುದು ಭಾವನವರಿಗೆ ಇಷ್ಟವಿರಲಿಲ್ಲ. ಗೋಪಾಲಕೃಷ್ಣರಾಯನು ಕೂಡ ಇದೇ ಖಾನಾವಳಿಗೆ ಬರುತ್ತಿದ್ದ; ಇವರು ರಾಜಕೀಯ ಚಟುವಟಿಕೆಗಳಲ್ಲಿ ಮುಳುಗುತ್ತಿದ್ದಾರೆ ಎಂಬ ಅನುಮಾನದಿಂದಲೇನೋ ಭಾವನವರು ಇಲ್ಲಿ ಊಟಕ್ಕೆ ಬರಬೇಕಿಲ್ಲ ಎಂದು ತಿಳಿಸಿ ಗೋಪಾಲ ಕೃಷ್ಣರಾಯ ಇಲ್ಲಿಗೆ ಊಟಕ್ಕೆ ಬರುವುದನ್ನು ನಿಲ್ಲಿಸಿದ.

ಸ್ವಾತಂತ್ರ್ಯ ಪಡೆಯಲು ಎಲ್ಲ ಕೋರ್ಟ್, ಕಛೇರಿ ಹಾಗೂ ಶಾಲೆಗಳನ್ನು ಮುಚ್ಚಬೇಕು ಎಂದು ಗಾಂಧೀಜಿ ಅವರು ಕರೆ ಕೊಟ್ಟಿದ್ದುದು ಹುಡುಗನಾಗಿದ್ದ ನನ್ನ ಮೇಲೂ ಪರಿಣಾಮ ಬೀರಿತ್ತು. ೧೯೨೦ರಲ್ಲಿ ಬಾಲಗಂಗಾಧರ ತಿಲಕರು ತೀರಿಕೊಂಡು ಸಂಪೂರ್ಣ ಸ್ವರಾಜ್ಯಕ್ಕಾಗಿ ಗಾಂಧೀಜಿ ಕೊಟ್ಟ ಕರೆಯಲ್ಲಿ ಖಾದಿ ಉಡುಗೆಯನ್ನೇ ತೊಡಬೇಕು, ವಿದೇಶಿ ಬಟ್ಟೆಗಳನ್ನು ಬಹಿಷ್ಕರಿಸಬೇಕು ಎಂಬ ತೀರ್ಮಾನದಲ್ಲಿ ನನ್ನ ಉಡುಪಿನ ಬಗೆಗೆ ಆಗಲೇ ಒಂದು ನಿರ್ಧಾರ ತಳೆದೆ. ಗಾಂಧೀಜಿ ಶಾಲೆಗಳನ್ನು ಬಹಿಷ್ಕರಿಸಲು ಕೊಟ್ಟ ಕರೆಗೆ ಮುಕ್ಕಾಲು ಪಾಲು ಜನ ಒಪ್ಪದೆಹೋದದ್ದು, ಬ್ರಿಟಿಷರ ಹಿಡಿತವಿಲ್ಲದ ರಾಷ್ಟ್ರೀಯ ಶಾಲೆಗಳು ಆರಂಭಗೊಳ್ಳಲೂ ಕಾರಣವಾಗಿತ್ತು. ಹಲವು ನಗರಗಳಲ್ಲಿ ಆರಂಭವಾದ ರಾಷ್ಟ್ರೀಯ ಶಾಲೆಗಳಂತೆ ಧಾರವಾಡ ದಲ್ಲಿಯೂ ಇಂಥ ಒಂದು ಶಾಲೆ ಪ್ರಾರಂಭವಾಯಿತು. ೧೯೨೧ರಲ್ಲಿ ಗೋಪಾಲಕೃಷ್ಣರಾಯ ಈ ಶಾಲೆಗೆ ಸೇರಿದ. ಇದರ ಮರುವರ್ಷ ೧೯೨೨ರಲ್ಲಿ ನಾನೂ ಇಲ್ಲಿಗೆ ಸೇರಿದೆ. ಇಲ್ಲಿಗೆ ಸೇರುವ ಮೊದಲಿನ ದಿನಗಳನ್ನು ನಾನು ಹೆಚ್ಚಾಗಿ ಅರೆಹೊಟ್ಟೆಯಲ್ಲಿಯೇ ಕಳೆದಿದ್ದೆ. ಭಾವನವರಿಗೆ ನಾನು ಇಲ್ಲಿಗೆ ಸೇರಿದ್ದು ಸರಿ ಕಂಡಿರಲಿಲ್ಲ. ಈ ಕಾರಣಕ್ಕಾಗಿ ಅಕ್ಕ ರುಕ್ಮಿಣಿಯೊಂದಿಗೆ ತುಸು ಮಾತೂ ನಡೆದಿತ್ತು. ಖಾನಾವಳಿಗೆ ಬರಬೇಡ ಎಂದು ಭಾವನವರು ಹೇಳಿದ್ದರು. ಹೀಗಾಗಿ ಸುಮಾರು ದಿನಗಳವರೆಗೆ ಊಟ ಹಾಗು ವಸತಿಗೆ ತೊಂದರೆಗಳನ್ನು ಒಡ್ಡಿತ್ತು. ಈ ಕಾರಣ ದಿಂದಲೇ ಉಚಿತ ಊಟದ ಸೌಕರ್ಯವಿದ್ದ 'ಆಶ್ರಮ'ಕ್ಕೆ ಸೇರಿದ್ದೆ. ಇಲ್ಲಿನ ನಿಯಮಗಳಿಗೆ ಒಗ್ಗಿಕೊಳ್ಳಲು ಕೂಡ ಯತ್ನಿಸುತ್ತಿದ್ದೆ. ಇಲ್ಲಿ ಬೆಳಗಿನ ಐದು ಗಂಟೆಗೇ ಏಳಬೇಕಿತ್ತು. ಸಂಧ್ಯಾವಂದನೆ ಮುಗಿಸಿ ಬಟ್ಟೆಗಳನ್ನು ಒಗೆದು, ಎಲ್ಲ ಹುಡುಗರೂ ಒಟ್ಟಿಗೆ ಕಲೆತು ಪುರಂದರದಾಸರ ಕೀರ್ತನೆಗಳನ್ನು ಹಾಡುವುದು, ಬಾವಿಯಿಂದ ನೀರು ಸೇದಿಕೊಂಡು ಸ್ನಾನ ಮಾಡುವುದು– ಹೀಗೆ ಇಲ್ಲಿನ ಜೀವನ ನಿಯಮಬದ್ಧವಾಗಿತ್ತು.

ಸು.ಶಿ. ದೇಸಾಯಿ ಅವರು ರಾಷ್ಟ್ರೀಯ ಶಾಲೆಯ ಪ್ರಿನ್ಸಿಪಾಲ್ ಆಗಿದ್ದರು. ಬೇಂದ್ರೆ ಅವರು ಆಗ ಅಲ್ಲಿ ಉಪಾಧ್ಯಾಯರಾಗಿದ್ದರು. ಗೋಪಾಲಕೃಷ್ಣರಾಯನ ಶಿಫಾರಸಿನಿಂದ ನನಗೆ ಇಲ್ಲಿ ಸ್ಥಳ ಸಿಕ್ಕಿತ್ತು. ಪ್ರಾರ್ಥನೆ, ಸ್ನಾನಗಳಾದ ಮೇಲೆ ತುಸು ಓದಿನಲ್ಲಿ ಮುಳುಗಿ ಒಂಬತ್ತಕ್ಕೆ ತಿಂಡಿ ಮುಗಿಸಿ, ಎರಡು ಗಂಟೆಗಳ ಪಾಠಗಳನ್ನು ಪೂರೈಸಿಕೊಂಡು 'ಮಧುಕರಿ'ಗೆಂದು ಹುಡುಗರು ಮನೆ ಮನೆಗಳಿಗೆ ಹೊರಡುತ್ತಿದ್ದರು. ನಾನು ಹೀಗೆ ಮಧುಕರಿಗೆ ಹೋಗಿ 'ಭವತಿ ಭಿಕ್ಷಾಂ ದೇಹಿ' ಎಂದು ಕೇಳುತ್ತಿದ್ದೆ. ಗುರುಕುಲ ಪದ್ಧತಿಯನ್ನು ವಿದ್ಯಾರ್ಥಿಗಳ ಅರಿವಿಗೆ ತಂದುಕೊಡು ವಂತಿದ್ದ ಆ ನಿಯಮವು ಶಿಸ್ತುಬದ್ಧ ಜೀವನಕ್ಕೆ ನಮ್ಮನ್ನು ಒಳಪಡಿಸುವಂತಿತ್ತು.

ಈ ಶಾಲೆಗೆ ಸೇರಿದ ಸುಮಾರು ಮೂರು ತಿಂಗಳ ನಂತರ ನನ್ನ ಆರೋಗ್ಯ ಹದಗೆಟ್ಟಿತು.

ಆಗ ಇಲ್ಲಿಯೇ ಉಪಾಧ್ಯಾಯರಾಗಿದ್ದ ಬುರ್ಲಿ ಬಿಂದುಮಾಧವರು ನನ್ನನ್ನು ತಮ್ಮ ಮನೆಗೆ ಚಿಕಿತ್ಸೆಗೆಂದು ಕರೆದೊಯ್ದು ಆರೈಕೆ ಮಾಡಿದರು. ಬುರ್ಲಿಯವರ ಶ್ರೀಮತಿ ಪದ್ದಕ್ಕ ನನ್ನನ್ನು ಸ್ವಂತ ಮಗನೆಂಬಂತೆ ನೋಡಿಕೊಂಡದ್ದು ಮರಣಾಂತಿಕ ಅವಸ್ಥೆಯಿಂದ ನನ್ನನ್ನು ಪಾರುಮಾಡಿತ್ತು.

೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಗಾಂಧೀಜಿ ಅಧ್ಯಕ್ಷರಾಗಿ ಆಯ್ಕೆಗೊಂಡು ಬಂದದ್ದು ಆಗ ಒಂದು ಹೊಸ ಅಲೆಯನ್ನೇ ತಂದಿತ್ತು. ಹಲವು ಭಾಗಗಳ ರಾಷ್ಟ್ರೀಯ ಶಾಲೆಗಳಿಂದ ಸ್ವಯಂಸೇವಕರು ಬಂದಿದ್ದಂತೆಯೇ ಧಾರವಾಡದಿಂದ ನಾನೂ ನಮ್ಮ ತಂಡದೊಂದಿಗೆ ಹೋಗಿದ್ದೆ. ಆಗ ಗಾಂಧೀಜಿಯವರನ್ನು ನಾನು ತುಂಬ ಹತ್ತಿರದಲ್ಲಿ ಕಂಡೆ. ಈ ಅಧಿವೇಶನ ನಡೆಯಲು ದೇಣಿಗೆ ಎತ್ತಿದವರಲ್ಲಿ ನಾನೂ ಸೇರಿದ್ದೆ. ಬುರ್ಲಿ ಅವರೊಂದಿಗೆ ಧಾರವಾಡ ಸುತ್ತಿನ ಹಳ್ಳಿಗಳಲ್ಲಿ ಶಾಲೆಗಾಗಿ ಹಣ ಸಂಗ್ರಹಿಸಲು ಹೋಗುತ್ತಿದ್ದೆ. ಬೆಳಗಾವಿ ಅಧಿವೇಶನಕ್ಕೆ ಬಂದಿದ್ದ ಹಲವಾರು ಮುಖಂಡರನ್ನು ನೋಡಿ, ಅವರ ಮಾತುಗಳನ್ನು ಕೇಳಿದ್ದು ನನ್ನಲ್ಲಿ ರಾಷ್ಟ್ರೀಯತೆ ಮತ್ತು ಸ್ವಾತಂತ್ರ್ಯ ಪ್ರಜ್ಞೆಯನ್ನು ಮೊದಲಿಗಿಂತ ಹೆಚ್ಚಿಸಿತ್ತು.

ಅದೇ ವರ್ಷ ನನಗೆ ಟೈಫಾಯಿಡ್ ತಗುಲಿ ನನ್ನ ಬಂಧುವೊಬ್ಬರ ಮನೆಯಲ್ಲಿ ತಂಗಿ ಸುಧಾರಿಸಿಕೊಂಡೆ. ಎರಡು ಸಲ ಕಣ್ಣಿನ ತೊಂದರೆ ಬಂದು ಅನಾರೋಗ್ಯದಲ್ಲಿ ರಾಷ್ಟ್ರೀಯ ಶಾಲೆಯನ್ನು ಬಿಟ್ಟು ಬೇರೆ ಶಾಲೆಗೆ ಸೇರಬೇಕು ಅನ್ನಿಸಿತ್ತು. ಆದರೆ ಹಣಕಾಸಿನ ಅನುಕೂಲವಿಲ್ಲದ್ದು ಮತ್ತು ಇಲ್ಲಿನ ವಿದ್ಯಾರ್ಥಿಗಳನ್ನು ಬೇರೆ ಶಾಲೆಗಳಲ್ಲಿ ಸೇರಿಸಿಕೊಳ್ಳದಿದ್ದುದು ನಾನು ಸುಮ್ಮನೆ ಇರುವಂತೆ ಮಾಡಿತ್ತು. ೧೯೨೮ರ ಮಾರ್ಚಿಯಲ್ಲಿ ಈ ಶಾಲೆ ಮುಚ್ಚಿಕೊಂಡಿತು.

ಈ ನಡುವೆ ೧೯೨೫ರಲ್ಲಿ ನನ್ನ ತಂಗಿ ಕಮಲಮ್ಮನ ಮದುವೆ ನಡೆಯಿತು. ೧೯೨೭ರಲ್ಲಿ ಭಾವ ಗೋವಿಂದಪ್ಪ ಅನಾರೋಗ್ಯಕ್ಕೆ ಒಳಗಾಗಿ ತೀರಿಕೊಂಡಿದ್ದರು. ಅದರಿಂದ ಅವರ ಸಂಸಾರ ತುಂಬ ತೊಂದರೆಗೆ ಸಿಲುಕಿತು. ಧಾರವಾಡದಲ್ಲಿ ಇರಲಾಗದೆ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲವಾಗುತ್ತದೆ ಎಂದು ಇವರೆಲ್ಲ ಕಾರ್ಕಳಕ್ಕೆ ಹೋಗಿದ್ದರು. ಆರೇಳು ವರ್ಷಗಳಿಂದ ಸಂಬಂಧ ಕಡಿದು ಹೋದಂತಿದ್ದರೂ ಅಕ್ಕನಿಗೆ ಬಂದ ವೈಧವ್ಯದ ಜೀವನ ನನಗೆ ತುಂಬ ದುಃಖ ತಂದಿತ್ತು. ಭಾವನಿಂದ ದೂರವಾದ ದಿನಗಳಲ್ಲಿ ಅಕ್ಕ ತನ್ನ ಗಂಡನಿಗೆ ಕಾಣದಂತೆ ನನಗೆ ಆಗಾಗ ತಿಂಡಿ ಕೊಡುತ್ತಿದ್ದುದು ನೆನಪಾಗುತ್ತಿತ್ತು. ಖಾನಾವಳಿಯನ್ನು ಭಾವನ ಹಿರಿಮಗ ಮಾದಪ್ಪ ನಡೆಸಲು ಯತ್ನಿಸಿದರೂ ಅನುಭವ ಸಾಲದೆ ಇದನ್ನು ಮುಚ್ಚಲಾಯಿತು...

**(ಗೋವಿಂದರಾಯರ ನೆನಪಿನ ಟಿಪ್ಪಣಿ ಇಲ್ಲಿಗೆ ನಿಂತಿದೆ.)**

•

**ಶ್ರೀ ಕಡಲಬಾಳು ಪ್ರಹ್ಲಾದಾಚಾರ್ಯ,** ಹೊಸಪೇಟೆ

ನನ್ನ ಹಾಗೂ ಗೋವಿಂದರಾಯನ ಸ್ನೇಹ ಸುಮಾರು ೭೦ ವರ್ಷದ್ದು. ನಾನು ಧಾರವಾಡಕ್ಕೆ ಅಲ್ಲಿನ ರಾಷ್ಟ್ರೀಯ ಮಹಾ ವಿದ್ಯಾಲಯದಲ್ಲಿ ಓದಲೆಂದು ೧೯೨೪ನೇ ಇಸವಿಯಲ್ಲಿ ಹೋದಾಗ ಅವನು ಕೂಡಾ ಅದೇ ಶಾಲೆಯಲ್ಲಿ ವಿದ್ಯಾರ್ಥಿಯಾಗಿದ್ದ ನೆನಪು. ೨೦ನೇ ಶತಮಾನದ

೧ನೇ ಮತ್ತು ೨ನೇ ದಶಕದಲ್ಲಿ ಇಡೀ ಭಾರತದಲ್ಲಿ, ಅದರಂತೆ ಕರ್ನಾಟಕದಲ್ಲಿ ನೈತಿಕ ಹಾಗೂ ಅಧ್ಯಾತ್ಮಿಕ ಮೌಲ್ಯಗಳ ಒಂದು ದೊಡ್ಡ ಬಿರುಗಾಳಿಯೇ ಎದ್ದಂತಿತ್ತು. ಅದಕ್ಕೆ ಕಾರಣ ಆ ಅವಧಿಯಲ್ಲಿ ಭಾರತದಲ್ಲಿ ಆಗಿಹೋದ ರಾಜಕೀಯ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಮಹಾ ವಿಭೂತಿಗಳೆನಿಸಿದ ಲೋಕಮಾನ್ಯ ತಿಲಕ, ಮಹಾತ್ಮ ಗಾಂಧಿ, ರಾಮಕೃಷ್ಣ ಪರಮ ಹಂಸ, ವಿವೇಕಾನಂದ, ರವೀಂದ್ರನಾಥ ಠಾಕೂರ, ಅರವಿಂದ ಘೋಷ ಮುಂತಾದವರ ಪ್ರಭಾವ. ಇದು ನಾವು ಕಲಿತ ರಾಷ್ಟ್ರೀಯ ಶಾಲೆಯಲ್ಲಿ ಕೂಡಾ ಎದ್ದು ಕಾಣುತ್ತಿತ್ತು. ಈ ಶಾಲೆಯ ಸಂಸ್ಥಾಪಕರು ರಂ.ರಾ. ದಿವಾಕರ, ಹುಕ್ಕೇರಿ ರಾಮರಾಯರು ಹಾಗೂ ವಿನಾಯಕರಾವ್ ಜೋಶಿ, ಸು.ಶಿ. ದೇಸಾಯಿ, ಬುರ್ಲಿ ಬಿಂದುಮಾಧವ ಮುಂತಾದವರು. ಈ ಶಾಲೆಯಲ್ಲಿ ಧಾರ್ಮಿಕ ಶಿಕ್ಷಣಕ್ಕೂ ಅತ್ಯಂತ ಮಹತ್ವ ಕೊಡುತ್ತಿದ್ದರು. ಹೀಗಾಗಿ ಪ್ರತಿನಿತ್ಯ ಧಾರ್ಮಿಕ ಶಿಕ್ಷಣದ ಒಂದು ಪೀರಿಯಡ್ ಇರುತ್ತಿತ್ತು. ಆಗ ಆ ಶಾಲೆಯಲ್ಲಿ ವಾಸಿಸಿದ ಹೊಸಕೆರೆ ಚಿದಂಬರಯ್ಯ ಎಂಬ ಘನ ವಿದ್ವಾಂಸರು; ತಾವು ಹೇಳುವ ಧಾರ್ಮಿಕ ಶಿಕ್ಷಣದಲ್ಲಿ ಭಾರತದಲ್ಲಿ ಹಿಂದೆ ಆಗಿಹೋದ ಧಾರ್ಮಿಕ ಸತ್ಪುರುಷರು ಹಾಗೂ ರಾಷ್ಟ್ರೀಯ ವೀರಶೂರರನ್ನು ಒಳ ಗೊಂಡಂತೆ ಇಪ್ಪತ್ತನೇ ಶತಮಾನದ ವಿಭೂತಿ ಪುರುಷರ ಚರಿತ್ರೆಗಳಲ್ಲಿಯ ಮುಖ್ಯಾಂಶಗಳನ್ನು ಹೇಳುತ್ತಿದ್ದರು. ಇದರಿಂದ ನಾವೆಲ್ಲರೂ ಪ್ರಭಾವಿತರಾದವರೇ.

ಅಂದಿನ ವಾತಾವರಣದಲ್ಲಿ ಮನುಷ್ಯ ಮುಖ್ಯವಾಗಿ ಬಾಳಬೇಕಾದ್ದು ಹಣ ಗಳಿಸುವು ದಕ್ಕಲ್ಲ. ಯಾವುದಾದರೊಂದು ಧ್ಯೇಯವನ್ನು ಇಟ್ಟುಕೊಂಡು ಅದನ್ನು ಸಾಧಿಸುವುದಕ್ಕಾಗಿ ತನ್ನ ಲಕ್ಷ್ಯವನ್ನೆಲ್ಲ ಕೇಂದ್ರೀಕರಿಸಬೇಕು. ಇದಲ್ಲದೆ ದೇಶಾಭಿಮಾನ, ಭಾಷಾಭಿಮಾನ, ಅದ ರೊಂದಿಗೆ ಸತ್ಯ, ಧರ್ಮ, ಪ್ರೇಮ, ಪ್ರಾಮಾಣಿಕತೆ, ತ್ಯಾಗ, ಸೇವೆ ಈ ಎಲ್ಲಾ ಗುಣಗಳನ್ನು ಬೆಳೆಸಿಕೊಳ್ಳುವುದಕ್ಕೆ ಜೀವನದಲ್ಲಿ ಪ್ರಾಮುಖ್ಯತೆ ಕೊಡಬೇಕು ಎಂದು ರಾಷ್ಟ್ರೀಯ ಶಾಲೆಯ ಪ್ರತಿಯೊಬ್ಬ ವಿದ್ಯಾರ್ಥಿಯ ಮನಸ್ಸಿನಲ್ಲಿ ಆಳವಾಗಿ ಮೂಡುವಂತೆ ಮಾಡಿದ್ದರು. ಹೀಗಾಗಿ ಗೋವಿಂದರಾಯನ ಜೀವನದಲ್ಲಿ ಸಹಿತ ಈ ತತ್ವಗಳಿಗೆ ಪ್ರಾಮುಖ್ಯತೆ ಬಂದು, ಹಣ ಗಳಿಸುವುದಕ್ಕೆ ಗೌಣಸ್ಥಾನ ಸ್ವಾಭಾವಿಕವಾಗಿ ಏರ್ಪಟ್ಟಿದ್ದವು.

ಆಗಿನ ಕಾಲದಲ್ಲಿ ಧಾರವಾಡವಂತೂ ಈ ಶತಮಾನದ ಎಲ್ಲ ಸಾಹಿತಿಗಳ ಕೇಂದ್ರ ವಾಗಿತ್ತು. ಆಲೂರು ವೆಂಕಟರಾವ್, ಮುದವೀಡು ಕೃಷ್ಣರಾವ್ ಮುಂತಾದ ಹಿರಿಯರಲ್ಲದೇ ಅದೇ ಆಗ ತಲೆಯೆತ್ತಿದ ಗೆಳೆಯರ ಗುಂಪಿನ ಬಳಗದ ಬೇಂದ್ರೆ, ಶಂ.ಬಾ. ಜೋಶಿ, ಬುರ್ಲಿ ಬಿಂದುಮಾಧವ ಮುಂತಾದವರ ವಿಶೇಷ ಪ್ರಭಾವ ವಿದ್ಯಾರ್ಥಿಗಳಾದ ನಮ್ಮೆಲ್ಲರ ಮೇಲೆ ಇತ್ತು. ಈ ಗೆಳೆಯರ ಗುಂಪಿಗೆ ಸೇರ್ಪಡೆಯಾದ ಗೋಕಾಕ್, ಮುಗಳಿ, ಕೃಷ್ಣ ಕುಮಾರ್ ಕಲ್ಲೂರ್, ನರೇಗಲ್ ಪ್ರಹ್ಲಾದ್, ಶೇ.ಗೋ. ಕುಲಕರ್ಣಿ, ನಾರಾಯಣಸಂಗಮ ಮುಂತಾದವ ರೊಡನೆ ನಿಕಟ ಸಂಪರ್ಕ ಗೋವಿಂದರಾಯನಿಗೂ, ನಮ್ಮೆಲ್ಲರಿಗೂ ಬಂದಿತ್ತು.

ಇನ್ನೂ ಒಂದು ವಿಶೇಷವೆಂದರೆ ಬಹಳ ಮಾಡಿ ೧೯ನೇ ಶತಮಾನದ ಕೊನೆಯಲ್ಲಿ ಕನ್ನಡ ನಾಡು ನುಡಿಗಳ ಒಂದು ಚಳುವಳಿಯನ್ನೇ ಎಬ್ಬಿಸಲಿಕ್ಕೆ ಧಾರವಾಡದಲ್ಲಿ ಆಗಿಹೋದ ಶಾಂತಕವಿಗಳು (ಸಕ್ರಿ ಬಾಳಾಚಾರ್ಯ) ಕಾರಣಪುರುಷರಾಗಿದ್ದರು. ಅವರು ಕನ್ನಡಿಗರಲ್ಲಿ ಕನ್ನಡಿಗರು

ಪೂರ್ವೇತಿಹಾಸವನ್ನು ಸ್ಮರಿಸಿ ಹುರಿದುಂಬಿಸುವ ಅನೇಕ ಕವಿತೆಗಳನ್ನು, ನಾಟಕಗಳನ್ನು ರಚಿಸಿದ್ದರು. ಅವರು ಬರೆದ ವಿದ್ಯಾರಣ್ಯ ನಾಟಕದಲ್ಲಿ ವಿಜಯನಗರ ಸಂಸ್ಥಾಪನೆ ಪ್ರಸಂಗದಲ್ಲಿ ವಿದ್ಯಾರಣ್ಯರ ಬಾಯಿಯಲ್ಲಿ 'ಏಳು ಸಾಯಣ, ಕಟ್ಟು ಗ್ರಂಥವ, ಹೊರಡು ಪಂಪಾಕ್ಷೇತ್ರಕೆ' ಎಂದು ಸ್ಫೂರ್ತಿ ಹೊಮ್ಮಿಸುವ ಒಂದು ಚರಣವೂ ಇತ್ತು. ೧೯೨೧ನೇ ಇಸ್ವಿಯ ಹೊತ್ತಿಗೆ ಅವರು ತೀರಿಕೊಂಡಿದ್ದರು. ಆದರೆ ಅವರ ಪ್ರಭಾವ ಮಾತ್ರ ಧಾರವಾಡದಲ್ಲಿ ಬಹಳವಾಗಿತ್ತು. ಕಾರಣ ಅವರ ಹೆಸರಿನಿಂದ 'ಶಾಂತೇಶವಾಚನಾಲಯ' ಎಂಬುದೊಂದು ಸಂಸ್ಥೆಯನ್ನು ಅರ್ಜಣಗಿ ರಾಮಣ್ಣ ಎಂಬುವರು ಸ್ಥಾಪಿಸಿ ಮುಷ್ಟಿ ಫಂಡಿನಿಂದ ಅದನ್ನು ನಡೆಸುತ್ತಿದ್ದರು. ಆ ವಾಚನಾಲಯ ಆಗ ದತ್ತಾತ್ರೇಯ ಗುಡಿಯ ಎದುರಿಗೆ, ಒಂದು ಅಟ್ಟದಮೇಲೆ ಇತ್ತು. ಅಲ್ಲಿಯೇ ಎಲ್ಲ ಕನ್ನಡ ಚಳುವಳಿಯ ಕಾರ್ಯಗಳು ನಡೆಯುತ್ತಿದ್ದವು. ಗೋವಿಂದರಾಯನೂ ಅದರಲ್ಲಿ ಸಕ್ರಿಯ ವಾಗಿ ಭಾಗವಹಿಸುತ್ತಿದ್ದ. ಅವನ ವಾರಿಗೆಯವರಲ್ಲಿ ಸಾಹಿತ್ಯದಲ್ಲಿ ಅಭಿರುಚಿಯುಳ್ಳ ಹಾಗೂ ಅನೇಕ ಕವಿತೆಗಳನ್ನು ರಚಿಸುತ್ತಿದ್ದ ಮೇವುಂಡಿ ಮಲ್ಲಾರಿ ಹಾಗೂ ಹೇಜೀಬ್ ರಾಮಚಂದ್ರ ಇವರು ಮುಖ್ಯರು. ರಾಷ್ಟ್ರೀಯ ಶಾಲೆಯಲ್ಲಿ ಕವಿಭೂಷಣ ಬೆಟಗೇರಿಯವರು ಅಲ್ಲದೆ ಬೇಂದ್ರೆಯವರ ನಿಕಟವರ್ತಿಗಳಾದ ಇತ್ತೀಚೆಗೆ ಕರ್ನಾಟಕ ಸಾಹಿತ್ಯದ ಹೆಸರಿನಲ್ಲಿ ಎಲ್ಲೂ ಕೇಳಬರದಿರುವ ಶ್ರೀಧರ ಖಾನೋಳಕರ್ ಎಂಬವರೊಬ್ಬರು–ಅವರೂ ಕವಿಗಳೇ–ಈ ಇಬ್ಬರಿಂದ ಕೂಡಾ ವಿದ್ಯಾರ್ಥಿಗಳಾದ ನಾವೆಲ್ಲ ಪ್ರಭಾವಿತರಾಗಿದ್ದೆವು. ಇಂತಹ ಒಂದು ವಾತಾವರಣದಲ್ಲಿ ಗೋವಿಂದರಾಯ ಬೆಳೆದಿದ್ದ.

ಅವನ ಉಳಿದ ಗೆಳೆಯರು ಮತ್ತು ಹಿರಿಯರು ಸಾಹಿತ್ಯ ರಚನೆಯ ಮೂಲಕ ಕನ್ನಡ ನುಡಿಯ ಸೇವೆಯನ್ನು ಆರಿಸಿಕೊಂಡರೆ, ಅವನು ಆರಿಸಿಕೊಂಡದ್ದು ಕನ್ನಡ ಸಾಹಿತ್ಯದ ಪ್ರಚಾರ, ಪ್ರಸಾರಗಳನ್ನು. ಇದಲ್ಲದೆ, ಆ ದಿನಗಳಲ್ಲಿಯೇ ಗೆಳೆಯರ ಗುಂಪಿನವರು ಆರಂಭ ಮಾಡಿದ ನಾಡಹಬ್ಬದ ಕಾರ್ಯಕ್ರಮಗಳಲ್ಲಿ ಕೂಡಾ ಅವನು ವಿಶೇಷ ಭಾಗವಹಿಸಿದ್ದುಂಟು.

ನಾನು ಹೇಳಿದ ರಾಷ್ಟ್ರೀಯ ಮಹಾಶಾಲೆ ೧೯೨೭ರಲ್ಲಿ ಮುಕ್ತಾಯವಾಯಿತು. ಆಮೇಲೆ ನಾನೂ ನನ್ನ ಸ್ನೇಹಿತರೂ ಧಾರವಾಡದಲ್ಲಿ ಶಿಕ್ಷಣವನ್ನು ಮುಂದುವರೆಸಿದೆವು. ಆ ಸಂದರ್ಭದಲ್ಲಿ ನನ್ನ ಮತ್ತು ಗೋವಿಂದರಾಯನ ಪರಮ ಸ್ನೇಹಿತನಾದ ಹೇಜೀಬ ರಾಮಚಂದ್ರ ತಮ್ಮ ಬಿ.ಎ., ಶಿಕ್ಷಣ ಮುಗಿಸಿದ ಮೇಲೆ ಪರಮಾರ್ಥ ಸಾಧನೆಯನ್ನೇ ಗುರಿಯಾಗಿಸಿಕೊಂಡು ಅದಕ್ಕಾಗಿ ಆಗ ಹುಬ್ಬಳ್ಳಿಯಲ್ಲಿ ವಾಸ ಮಾಡುತ್ತಿದ್ದ ದತ್ತು ದೀಕ್ಷಿತ್ ಎಂಬುವರನ್ನು ಗುರುಗಳನ್ನಾಗಿ ಮಾಡಿಕೊಂಡು ತನ್ನ ಜೀವನವನ್ನೇ ಅವರಿಗೆ ಅರ್ಪಿಸಿಕೊಂಡು ಅವರ ಸೇವೆ ಮಾಡುತ್ತಲಿದ್ದ. ಆಗ ಅವನ ಗುರುಗಳು ಹೇಜೀಬನ ಸಾಹಿತ್ಯಾಭಿರುಚಿಯನ್ನು ಕಂಡು ಅದಕ್ಕಾಗಿ ಅವನಿಗೊಂದು ಕಾರ್ಯಕ್ಷೇತ್ರವನ್ನು ನಿರ್ಮಿಸುವ ಉದ್ದೇಶದಿಂದ 'ಸಾಹಿತ್ಯ ಭಂಡಾರ' ಎಂಬ ಪುಸ್ತಕದ ಅಂಗಡಿಯನ್ನು ಆರಂಭ ಮಾಡಿ ಅದರ ಹೊಣೆಯನ್ನು ಹೇಜೀಬನಿಗೆ ಒಪ್ಪಿಸಿದರು. ಆದರೆ ಅವನಿಗೆ ಅದನ್ನು ನಡೆಸಿಕೊಂಡು ಹೋಗುವಲ್ಲಿ ಆಸ್ಥೆಯಿರಲಿಲ್ಲ. ಪ್ರತ್ಯಕ್ಷ ಅಧ್ಯಾತ್ಮ ಸಾಧನೆಯಲ್ಲಿ ತೊಡಗಿರುವುದರ ಕಡೆಗೆ ಅವನ ಲಕ್ಷ್ಯವಿತ್ತು. ಆ ಸಂದರ್ಭದಲ್ಲಿ ಈ ಸಾಹಿತ್ಯ ಭಂಡಾರ ವನ್ನು ನಡೆಸಿಕೊಂಡು ಹೋಗಲು ಬಹಳ ಮಾಡಿ ೧೯೩೪ರಲ್ಲಿ ನಾನು ಮತ್ತು ಹೇಜೀಬ,

ಗೋವಿಂದರಾಯನ ಹೆಸರನ್ನು ದೀಕ್ಷಿತರಿಗೆ ಸೂಚಿಸಿ ಅವನನ್ನು ಹುಬ್ಬಳ್ಳಿಗೆ ಕರೆದುಕೊಂಡು ಬಂದು ಅವರ ಭೆಟ್ಟಿ ಮಾಡಿಸಿದ ನೆನಪು. ಈ ಸಾಹಿತ್ಯ ಭಂಡಾರದಲ್ಲಿ ಅವನ ಕಾರ್ಯಕ್ಷೇತ್ರ ಅಂದಿನಿಂದ ಆರಂಭವಾಯಿತು. ಅವನಿಗೆ ಬರೀ ಸಾಹಿತ್ಯ ಸೇವೆಯಲ್ಲದೆ ತನ್ನ ಕುಟುಂಬದ ಸಂರಕ್ಷಣೆಗೆ ಒಂದು ಮಾರ್ಗ ಬೇಕಾಗಿತ್ತು.

ಆಮೇಲೆ ನನಗೆ ಅವನ ಸಂಪರ್ಕ ನಾನು ಹೊಸಪೇಟೆಗೆ ೧೯೩೮ರಲ್ಲಿ ವಕೀಲಿ ವೃತ್ತಿಯನ್ನು ಆರಂಭಮಾಡಿದ ಕೆಲವೊಂದು ವರ್ಷಗಳಾದ ಮೇಲೆ ಬಂದಿತು. ಹುಬ್ಬಳ್ಳಿಯ ಸಾಹಿತ್ಯ ಭಂಡಾರದಲ್ಲಿ ದತ್ತೂ ದೀಕ್ಷಿತರು ಹಾಕಿದ ಬಂಡವಾಳವನ್ನೆಲ್ಲ ಕೆಲವೇ ವರ್ಷಗಳಲ್ಲಿ ತೀರಿಸಿ ಅದನ್ನು ತನ್ನ ಸ್ವಂತದ್ದನ್ನಾಗಿ ಮಾಡಿಕೊಂಡ. ಆಗಿನ ಕಾಲದಲ್ಲಿ ಕನ್ನಡ ಪುಸ್ತಕಗಳನ್ನು ಕೊಂಡು ಓದುವ ಜನತೆಯೇ ಅತಿ ವಿರಳ. ಆದ ಕಾರಣ ಕೂತಲ್ಲಿಯೇ ಕೂತು ಪುಸ್ತಕ ಮಾರಾಟ ಮಾಡುವುದರಿಂದ ಹೆಚ್ಚಿನ ಸಂಪಾದನೆ ಅಸಾಧ್ಯವಾಗಿತ್ತು. ಹೀಗಾಗಿ ಗೋವಿಂದರಾಯನು ಪ್ರವಾಸ ಕೈಕೊಂಡು ಎಲ್ಲೆಲ್ಲಿ ಹೈಸ್ಕೂಲ್‌ಗಳು, ಸಾರ್ವಜನಿಕ ವಾಚನಾಲಯಗಳು ಇರುತ್ತಿದ್ದವೋ ಅಲ್ಲಿಗೆ ಹೋಗಿ ಅಲ್ಲಿನ ವ್ಯವಸ್ಥಾಪಕರನ್ನು ಕಂಡು ತನ್ನಲ್ಲಿ ದೊರಕುವ ಪುಸ್ತಕಗಳ ಮಾದರಿಯನ್ನು ಸಹ ತೋರಿಸಿ, ಅವರಿಂದ ಆರ್ಡರ್ ಬುಕ್ ಮಾಡಿಕೊಳ್ಳುತ್ತಿದ್ದ. ಇಂತಹ ಸಂದರ್ಭದಲ್ಲಿ ಅವನು ಆಗಿನ ಕಾಲದ ಕವಿಗಳ ಕವಿತೆಗಳನ್ನು ಕೂಡಾ ಸಾರ್ವಜನಿಕರಲ್ಲಿ ಪರಿಣಾಮವಾಗಿ ಓದಿ ಪ್ರಸಾರ ಮಾಡುತ್ತಿದ್ದ. ಬೇಂದ್ರೆಯವರ ಕವಿತೆಗಳು ಮತ್ತು ರಾಜರತ್ನಂರವರ 'ರತ್ನನ ಪದಗಳು' ಅವನಿಗೆ ಒಳ್ಳೇ ಇಷ್ಟ. ಅದರ ಭಾಷೆ ತುಸು ಗ್ರಾಮ್ಯ. ಸಾಮಾನ್ಯ ಜನರಿಗೆ ಅದನ್ನು ಓದುವುದು ಕೂಡಾ ಕಷ್ಟ. ಅಂತಹದನ್ನು ಒಳ್ಳೇಪರಿಣಾಮಕಾರಿಯಾಗಿ ಸಾರ್ವಜನಿಕ ಸಭೆಗಳಲ್ಲಿ ಓದುತ್ತಿದ್ದ.

ಮುಂದೆ ತಾನು ಬೆಂಗಳೂರಿಗೆ ಬಂದು ನೆಲೆಸಿದ ಮೇಲೆ ಪ್ರಕಾಶನ ಕಾರ್ಯ ಹೆಚ್ಚಾಗಿ ಕೈಕೊಂಡದ್ದು ಎಲ್ಲರಿಗೂ ತಿಳಿದ ವಿಷಯ.

ಅವನ ಪ್ರಾಮಾಣಿಕತನದ ಬಗ್ಗೆ ಮತ್ತು ಸತ್ಯಸಂಧತೆಯ ಬಗ್ಗೆ ನನಗೆ ಗೊತ್ತಿದ್ದ ಒಂದೆರಡು ನಿದರ್ಶನಗಳನ್ನು ಹೇಳಬಯಸುವೆ.

ಹುಬ್ಬಳ್ಳಿಯಲ್ಲಿ ಸಾಹಿತ್ಯ ಭಂಡಾರವನ್ನು ನಡೆಸುತ್ತಿದ್ದ ಮನೆ ಬಾಡಿಗೆಯದು. ಒಂದು ಕಾಲಕ್ಕೆ ಆ ಮನೆಯ ಮಾಲಿಕ ಅವನನ್ನು ಬಿಡಿಸುವುದಕ್ಕಾಗಿ ಕೋರ್ಟಿಗೆ ಹೋದ. ಕಾಯ್ದೆಯ ಪ್ರಕಾರ ಅವನಿಗೆ ಬಿಡಿಸುವ ಸಂದರ್ಭ ಕಡಿಮೆ ಇದ್ದರೂ ಕೋರ್ಟುಗಳ ಕಲುಷಿತ ವಾತಾವರಣ ದಿಂದಾಗಿ ಗೋವಿಂದರಾಯನ ನ್ಯಾಯವಾದ ಹೊಡೆದಾಟಕ್ಕೆ ಯಶಸ್ಸು ಸಿಗುವುದು ಕಷ್ಟವಾಗಿತ್ತು. ಅಂತಹ ಸಂದರ್ಭದಲ್ಲಿ ವಾಮ ಮಾರ್ಗಗಳನ್ನು ಹಿಡಿದು ಹಣ ಖರ್ಚು ಮಾಡಿದ್ದರೆ ಅದು ಸಾಧ್ಯವಾಗುತ್ತಿತ್ತು. ಆದರೆ ಆ ಮಾರ್ಗವನ್ನು ಅವನು ಅನುಸರಿಸಲಿಲ್ಲ. ತನ್ನ ಮಿತ್ರನೊಬ್ಬನ ಸಹಾಯ ಪಡೆದು ಮನೆ ಮಾಲೀಕನೊಡನೆ ರಾಜಿಯಾಗಿ ಮನೆ ಬಿಡಿಸುವುದನ್ನು ತಪ್ಪಿಸಿಕೊಂಡ.

ತಾನು ಹಾನಿ ಹೊಂದಿದರೂ ಇನ್ನೊಬ್ಬರಿಗೆ ಹಾನಿ ಮಾಡುವ ಅಪೇಕ್ಷೆಯನ್ನು ಎಂದೂ ಬಯಸದ ಗೋವಿಂದರಾಯನ ಪ್ರವೃತ್ತಿ ನನ್ನ ಸ್ವಂತ ನಿದರ್ಶನಕ್ಕೆ ಬಂದಿದೆ. ನಾನು ೧೯೭೩ರಲ್ಲಿ 'ಚಿಂತನ ಸಂದೇಶ' ೧೯೭೫ರಲ್ಲಿ 'ರಾಯರ ಅಂತರಂಗ' ಎಂಬ ಪುಸ್ತಕಗಳನ್ನು ಪ್ರಕಟಿಸಿ, ಆ

ಪುಸ್ತಕಗಳು ಹುಬ್ಬಳ್ಳಿಯ ಹಾಗೂ ಬೆಂಗಳೂರಿನ 'ಸಾಹಿತ್ಯ ಭಂಡಾರ'ದಲ್ಲಿ ದೊರಕುವುದಾಗಿ ಪ್ರಕಟಿಸಿದೆ. ಅದಕ್ಕಾಗಿ ಅವನ ಕಡೆಗೆ ನೂರಾರು ಪುಸ್ತಕಗಳನ್ನು ಕೊಟ್ಟಿದ್ದೆ. ಪುಸ್ತಕಗಳು ಅಷ್ಟೊಂದು ಮಾರಾಟವಾಗುವಂತಹ ವಿಷಯವನ್ನು ಒಳಗೊಂಡವುಗಳಲ್ಲ, ಮೇಲಾಗಿ ಆ ಪುಸ್ತಕಗಳಿಂದ ಹಣಗಳಿಸುವ ಉದ್ದೇಶವೂ ನನ್ನದಿರಲಿಲ್ಲ. ಅದಕ್ಕಾಗಿ ನಾನು ಆ ಪುಸ್ತಕಗಳ ಮಾರಾಟದ ಲೆಕ್ಕ ಕೇಳುವ ಗೋಜಿಗೆ ಹೋಗಿದ್ದಿಲ್ಲ. ತೀರ ಇತ್ತೀಚೆಗೆ ಅಂದರೆ ಅವನು ಸಾಯುವುದಕ್ಕಿಂತ ೪-೫ ವರ್ಷಗಳ ಹಿಂದೆ, ನಾನು ಬೆಂಗಳೂರಿಗೆ ಹೋದಾಗ್ಗೆ ಅವನನ್ನು ಕಾಣಲು ಅವನ ಮನೆಗೆ ಹೋಗಿದ್ದೆ. ಆಗಲೇ ಗೋವಿಂದರಾಯನ ಆರೋಗ್ಯ ಸರಿಯಾಗಿದ್ದಿಲ್ಲ. ಭಂಡಾರಕ್ಕೆ ಹೋಗುವುದನ್ನು ಬಹಳ ಕಡಿಮೆ ಮಾಡಿದ್ದ. ಕಣ್ಣು, ಕಿವಿಗಳ ಪಾಟವತ್ವ ಕಡಿಮೆಯಾಗಿತ್ತು. ನಾನು ಅವನ ಮನೆಯಲ್ಲಿ ಭೆಟ್ಟಿಯಾದಾಗ್ಗೆ ಅವನು ಮಾಡಿದ ಮೊದಲ ಕೆಲಸವೆಂದರೆ ಕೂಡಲೇ ಎದ್ದು ಹೋಗಿ ಒಂದು ಸಾವಿರ ರೂಪಾಯಿಗಳ ಚೆಕ್ಕನ್ನು ಕೈಯಲ್ಲಿಟ್ಟ. ನನಗೆ ಆಶ್ಚರ್ಯ. ಇದು ಏತಕ್ಕಾಗಿ ಎಂದು ನಾನು ಕೇಳಲು, 'ನಿನ್ನ ಪುಸ್ತಕಗಳ ಮಾರಾಟದ್ದು' ಎಂದು ಹೇಳಿದ. 'ಎಷ್ಟು ಪುಸ್ತಕಗಳು ಮಾರಾಟವಾಗಿವೆ' ಎಂದು ಕೇಳಿದರೆ 'ಅದರ ಲೆಕ್ಕ ಕೊಡಲು ಬರುವುದಿಲ್ಲ. ಎಷ್ಟೋ ಪುಸ್ತಕಗಳು ಪ್ರತಿವರ್ಷ ಮಳೆಗಾಲದಲ್ಲಿ ನಾನು ಪುಸ್ತಕ ಒಟ್ಟಿದ ಮಳಿಗೆಯಲ್ಲಿ ನೀರು ಹೊಕ್ಕು ಕೆಟ್ಟುಹೋಗುತ್ತವೆ. ಎಷ್ಟು ಕೆಟ್ಟುಹೋದವು, ಎಷ್ಟು ಮಾರಾಟವಾದವು ಎಂದು ಹೇಳಲು ನನಗೆ ಸಾಧ್ಯವಿಲ್ಲ. ಇವತ್ತಿಗೆ ನನ್ನ ಅಂಗಡಿಯಲ್ಲಿ ಉಳಿದ ನಿನ್ನ ಪುಸ್ತಕಗಳ ಸಂಖ್ಯೆಯ ಮೇಲಿಂದ ಇಂತಿಷ್ಟು ಖರ್ಚಾಗಿದೆ ಎಂದು ಲೆಕ್ಕ ಹಾಕಿ ಇದನ್ನು ಕೊಡುತ್ತಿರುವೆ' ಎಂದು ಹೇಳಿದ. ಅಂದರೆ ತಾನು ಇರುವುದರಲ್ಲಿಯೇ ಈ ಬಾಬ್ತು ಎಲ್ಲರ ಋಣವನ್ನು ತೀರಿಸಿಬಿಡುವ ಹಂಬಲ! ನಾನು ಊರಿಗೆ ಹೋದ ಮೇಲೆ ಅಕಸ್ಮಾತ್ ನನ್ನಲ್ಲಿ ಇವನಿಗೆ ಎಷ್ಟು ಪುಸ್ತಕ ಕೊಟ್ಟಿದ್ದೆ ಎಂಬುವ ವಿವರ ತಿಳಿದು, ಅದರಿಂದ ಕೆಲವೊಂದು ಹಣ ಗೋವಿಂದರಾಯ ಈಗಾಗಲೇ ಕೊಟ್ಟದ್ದು ಹೊರಟಿತು. ಆ ಕೊಟ್ಟ ಹಣವನ್ನು ಕೂಡಾ ಮುರಿದುಕೊಳ್ಳದೆ, ಈ ಸಾವಿರ ರೂಪಾಯಿ ಚೆಕ್ ಕೊಟ್ಟುಬಿಟ್ಟಿದ್ದ. ಹೀಗಾಗಲು ಕಾರಣವೆಂದರೆ ಉಳಿದ ಗ್ರಂಥಕರ್ತರಂತೆ ಈ ಪುಸ್ತಕದ ವ್ಯವಹಾರದಲ್ಲಿ ಯಾವುದೇ ಒಂದು ಲಿಖಿತ ಕಾಗದ ಪತ್ರಗಳು ನಮ್ಮಲ್ಲಿ ಇದ್ದಿಲ್ಲ. ನಾನು ಎಷ್ಟು ಪುಸ್ತಕ ಕೊಟ್ಟಿದ್ದೆ ಎಂಬುದಕ್ಕೆ ಅವನಿಂದ ರಶೀದಿ ಪಡೆದಿದ್ದಿಲ್ಲ. ನನಗೆ ಹಣ ಕೊಟ್ಟ ಬಗ್ಗೆ ನನ್ನಿಂದಲೂ ಅವನು ರಶೀದಿ ಪಡೆದಿದ್ದಿಲ್ಲ. ಬಹಳ ಮಾಡಿ ಅವನಿಗೆ ನನಗೆ ಹಣ ಕೊಟ್ಟ ನೆನಪು ಇರಲಿಕ್ಕಿಲ್ಲ. ಹೀಗೆ ತಾನು ಅಂತಹ ಸಂಪತ್ತಿಕ ಸ್ಥಿತಿಯಲ್ಲಿರದಿದ್ದರೂ ಇನ್ನೊಬ್ಬರಿಗೆ ತನ್ನಿಂದ ಲುಕ್ಸಾನು ಆಗಬಾರದೆಂಬ ಮನೋಭಾವ ತಾಳಿದ ಮಹಾಪುರುಷ ಆತ. ನಾನು ಅಂದಿನಿಂದ ಅವನು ಮೊದಲಿಗೆ ಹಣ ಕೊಟ್ಟದ್ದನ್ನು ಮುರಿದು, ಹೆಚ್ಚಿನ ಹಣವನ್ನು ಅವನಿಗೆ ವಾಪಸ್ಸು ಕಳಿಸಬೇಕಾಯಿತು.

ಇನ್ನೂ ಒಂದು ಅವನ ಗುಣವೆಂದರೆ ತನ್ನ ಸ್ನೇಹಿತರ ಬಗ್ಗೆ ಕೆಟ್ಟ ಮಾತುಗಳನ್ನು ಆಡುವುದಿರಲಿ, ಇನ್ನೊಬ್ಬರಿಂದ ಕೇಳುವುದು ಕೂಡಾ ಅವನಿಗೆ ಸೇರುತ್ತಿರಲಿಲ್ಲ. ಅಂತಹ ಸಂದರ್ಭ ನನಗೆ ಒಮ್ಮೆ ಬಂದಿತ್ತು. ನನಗೂ, ಅವನಿಗೂ ಸ್ನೇಹಿತನಾದ ಒಬ್ಬ ವ್ಯಕ್ತಿ ತಾನು ಅಧ್ಯಾತ್ಮ ಮಾರ್ಗ ಹಿಡಿದುದರ ಬಂಡವಾಳ ಮಾಡಿಕೊಂಡು ಮತ್ತು ತನ್ನ ಬಗ್ಗೆ

ಗೋವಿಂದರಾಯಗೆ ಇದ್ದ ಶ್ರದ್ಧಾ ಭಕ್ತಿಗಳ ದುರುಪಯೋಗ ಮಾಡಿಕೊಂಡು ಮೇಲಿಂದ ಮೇಲೆ ಇವನಿಂದ ಹಣವನ್ನು ಪಡೆಯುತ್ತಿದ್ದ; ಎಂಬ ವಿಷಯ ಆ ಸ್ನೇಹಿತ ತೀರಿಕೊಂಡ ಮೇಲೆ ನನಗೆ ತಿಳಿಯಿತು. ಆ ಹಣವೇನೂ ಸಣ್ಣಪುಟ್ಟ ಮೊತ್ತವಲ್ಲ. ಒಟ್ಟು ಹನ್ನೆರಡರಿಂದ ಹದಿನೈದು ಸಾವಿರದವರೆಗೂ ಇದ್ದಂತೆ ಕಾಣಿಸಿತು. ಇದರಿಂದ ನನಗಂತೂ ಗೋವಿಂದರಾಯನ ಒಳ್ಳೇ ಸ್ವಭಾವದ ದುರುಪಯೋಗ ಮಾಡಿಕೊಂಡ ಸ್ನೇಹಿತನ ಬಗ್ಗೆ ಒಂದು ರೀತಿಯ ರೋಷವೇ ಉತ್ಪನ್ನವಾಗಿತ್ತು. ದೇವಮಾರ್ಗ ಹಿಡಿದ ಮನುಷ್ಯ ಇಂತಹ ಹೇಯ ಕೆಲಸಕ್ಕೆ ಕೈ ಹಾಕಿದ್ದು ನನಗೆ ಅತ್ಯಂತ ಕೆಟ್ಟೆನಿಸಿತು. ಆಮೇಲೆ ಗೋವಿಂದರಾಯನನ್ನು ನಾನು ಬೆಂಗಳೂರಿನಲ್ಲಿ ಭೆಟ್ಟಿ ಆದಾಗ್ಗೆ ಈ ವಿಷಯ ಪ್ರಸ್ತಾಪಿಸಲು ಪ್ರಯತ್ನ ಪಟ್ಟೆ. ಮತ್ತು ಅವನು ಶ್ರದ್ಧಾಭಕ್ತಿ ಇಟ್ಟ ವ್ಯಕ್ತಿ ಕೊನೆ ಕೊನೆಗೆ ನೈತಿಕ ಪತನವನ್ನು ಹೊಂದಿ ಗೋವಿಂದರಾಯನಿಂದ ಹಣ ಪಡೆದ ಬಗ್ಗೆ ಹೇಳುವುದಿತ್ತು. ಆದರೆ ಆ ವಿಷಯ ತೆಗೆದ ಕೂಡಲೇ ಗೋವಿಂದರಾಯ ನನಗೆ ಮುಂದೆ ಮಾತನಾಡಲು ಬಿಡಲಿಲ್ಲ. ಅವನು ಹೇಳಿದ್ದು ಇಷ್ಟೇ. 'ಪ್ರಹ್ಲಾದ, ಆ ವ್ಯಕ್ತಿಯ ಬಗ್ಗೆ ನನಗೆ ಅತ್ಯಂತ ಪೂಜ್ಯಭಾವನೆ ಮೂಡಿಬಿಟ್ಟಿದೆ. ಕಾರಣ ಈ ಪೂಜ್ಯಭಾವನೆಯನ್ನು ಕೆಡಿಸಿಕೊಳ್ಳುವ ಇಷ್ಟ ನನಗಿಲ್ಲ. ನಾನು ಇರುವವರೆಗೂ ಅವನ ಬಗ್ಗೆ ಪೂಜ್ಯಭಾವನೆ ಇಟ್ಟುಕೊಳ್ಳಬೇಕೆಂದೇ ನನ್ನ ಹಂಬಲ' ಎಂದು ಹೇಳಿಬಿಟ್ಟು, ನನ್ನನ್ನು ನಿರುತ್ತರನನ್ನಾಗಿ ಮಾಡಿದ.

ನನ್ನ ಕುಟುಂಬದ ಮತ್ತು ಅವನ ಕುಟುಂಬದ ನಡುವೆ ಅತ್ಯಂತ ಹಾರ್ದಿಕ ಸಂಬಂಧವಿತ್ತು. ತಾನು ಯಾವುದೇ ಪುಸ್ತಕವನ್ನು ಪ್ರಕಟ ಮಾಡಿದರೆ ಕೂಡಲೇ ಅದರದೊಂದು ಪ್ರತಿ ನನಗೆ ಕಳಿಸುವ ಪರಿಪಾಠ ಇಟ್ಟುಕೊಂಡಿದ್ದ. ಇದಲ್ಲದೆ ನನ್ನ ಮನೆಯಲ್ಲಿ ನಡೆಯುವ ಶುಭಸಮಾರಂಭಗಳಿಗೆ ತಪ್ಪದೇ ಬರುತ್ತಿದ್ದ. ತಾನು ಪ್ರವಾಸ ಮಾಡಿ ಪುಸ್ತಕಗಳಿಗೆ ಆರ್ಡರನ್ನು ದೊರಕಿಸುವ ಕಾಲದಲ್ಲಿ ನಮ್ಮ ಘುನೆಯಲ್ಲಿಯೇ ಉಳಿದು ನಮ್ಮ ಕುಟುಂಬದ ಒಬ್ಬ ಸದಸ್ಯನೇ ಆಗಿರುತ್ತಿದ್ದ.

**ಶ್ರೀ ಭಾಲಚಂದ್ರ ಘಾಣೇಕರ,** ಧಾರವಾಡ

ನನಗೆ ಮಂಗಳೂರ ಗೋವಿಂದರಾಯನ ನಿಕಟ ಪರಿಚಯವಾದದ್ದು ೧೯೨೪ರಲ್ಲಿ. ಆಗ ಧಾರವಾಡ ಮಾಳಮರಡಿಯ ರಾಷ್ಟ್ರೀಯ ಶಾಲೆಯಲ್ಲಿ ನಾವೆಲ್ಲ ಜೊತೆಯಾಗಿ ಇದ್ದೆವು. ಅಲ್ಲಿ ನಾವು ನಮ್ಮದೇ ಆದ ಐವರದೊಂದು ಸ್ನೇಹಿತರ ಕೂಟವನ್ನು ಕಟ್ಟಿಕೊಂಡಿದ್ದೆವು. ಜೀವಗಳು ಐದಾದರೂ ಆತ್ಮವು ಒಂದೇ ಎಂಬಂತೆ ಪರಸ್ಪರರ ಸುಖ ದುಃಖಗಳಲ್ಲಿ ಭಾಗಿಯಾಗುತ್ತ ನಕ್ಕು ನಲಿದಾಡುತ್ತ ಇದ್ದೆವು. ನಸುಕಿನ ಐದು ಗಂಟೆಯ ಪ್ರಾರ್ಥನೆ ಮುಗಿಯುತ್ತಲೆ ಜೊತೆ ಜೊತೆಯಾಗಿ ನೀರು ಸೇದುವುದು, ತಣ್ಣೀರು ಸ್ನಾನ ಮಾಡುವುದು, ಬಟ್ಟೆ ಒಗೆದು ಒಣಹಾಕಿಕೊಳ್ಳುವುದು, ನಮ್ಮ ನಿತ್ಯದ ಕಾಯಕವಾಗಿತ್ತು. ಮಧ್ಯಾಹ್ನ ಒಬ್ಬೊಬ್ಬರು ಎರಡೆರಡು ಓಣಿಗಳಿಗೆ ಹೋಗಿ ಮಧುಕರಿ ಬೇಡಿ ತರುತ್ತಿದ್ದೆವು. ಆಶ್ರಮದ ವಿದ್ಯಾರ್ಥಿಗಳೆಲ್ಲರೂ ತಮ್ಮ ತಮ್ಮ ಜೋಳಿಗೆಯಲ್ಲಿಯ ಅನ್ನ, ರೊಟ್ಟಿ, ಪಲ್ಲೆ ಮತ್ತು ತವಲಿಗಳಲ್ಲಿಯ ಸಾರು-ಹುಳಿ ಎಲ್ಲವನ್ನೂ ಬೇರೆ ಬೇರೆ ದೊಡ್ಡ ಪಾತ್ರಗಳಲ್ಲಿ ಒಟ್ಟುಗೂಡಿಸಿ ಜೊತೆಯಾಗಿ ಕುಳಿತು

ಹಾಯಾಗಿ ಉಂಡು, ಮಿಕ್ಕದ್ದನ್ನೆಲ್ಲ ಸಾಯಂಕಾಲಕ್ಕಾಗಿ ಮುಚ್ಚಿಟ್ಟುಕೊಂಡು ನಮ್ಮ ನಮ್ಮ ಕ್ಲಾಸುಗಳಿಗೆ ಹೋಗುತ್ತಿದ್ದೆವು. ಪ್ರತಿ ಶನಿವಾರ ನಸುಕಿನ ಸ್ನಾನ ಮುಗಿದೊಡನೆ ನುಗ್ಗೀಕೆರಿಗೆ ಹೋಗಿ ಹನುಮಪ್ಪನ ದರ್ಶನ ಪಡೆದು ಬರುತ್ತಿದ್ದೆವು. ೧೯೨೪ರ ಡಿಸೆಂಬರ್‌ನಲ್ಲಿ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಸೇರಿದಂಥ ಬೆಳಗಾಂವಿಯ ಅ.ಭಾ. ಕಾಂಗ್ರೆಸ್ ಅಧಿವೇಶನಕ್ಕೆ, ನಮ್ಮ ರಾಷ್ಟ್ರೀಯ ಶಾಲೆಯ ಪರವಾಗಿ ಸೇವಾದಲ ಸೈನಿಕರಾಗಿ ಹೋಗಿ ಸೇವೆ ಸಲ್ಲಿಸಿದೆವು. ಇದರಿಂದಾಗಿ ಎಂಥ ಒಳ್ಳೆ ವಾತಾವರಣದಲ್ಲಿ ನಮ್ಮ ಸ್ನೇಹಿತರ ಬಳಗ ಕೂಡಿಕೊಂಡಿತ್ತೆಂಬುದರ ಕಲ್ಪನೆ ಸಹಜವಾಗಿ ಬರುವಂತಿದೆ.

ನಮ್ಮ ಬಳಗದ ಮೇವುಂಡಿ ಮಲ್ಲಾರಿಯು G.B.S.R.M. ಎಂಬ ಐದು ಜನರ ಮೊನೋಗ್ರಾಂ ರಬ್ಬರಿನಲ್ಲಿ ಕೆತ್ತಿ ಲೆಟರ್‌ಪ್ಯಾಡುಗಳ ಮೇಲೆ ಉಪಯೋಗಿಸಲು ಕೊಟ್ಟದ್ದು ಇಂದಿಗೂ ನನ್ನ ಸ್ಮರಣೆಯಲ್ಲಿದೆ. ಅದರಲ್ಲಿಯ (S) ಶ್ರೀನಿವಾಸಕುಲಕರ್ಣಿ. ನೃತ್ಯ ಮತ್ತು ನಾಟ್ಯಕಲೆಯಲ್ಲಿ ಪಾರುಗತನಾಗಿ ಬಂದು ಧಾರವಾಡ ಮತ್ತು ಹಂಸಭಾವಿಗಳಲ್ಲಿ ನೃತ್ಯಶಾಲೆಗಳನ್ನು ತೆರೆದು ವಿಖ್ಯಾತನಾದವ. (R) ರಾಮಚಂದ್ರ ಹೇಜೀಬ. ಅಖಂಡ ಬ್ರಹ್ಮಚಾರಿಯಾಗಿದ್ದುಕೊಂಡು ಕುರವಪುರ ದತ್ತಸ್ಥಾನದಲ್ಲಿ ಜಪತಪ ಅನುಷ್ಠಾನಮಾಡುತ್ತ ೩೦ ವರ್ಷಗಳವರೆಗೆ ಅಲ್ಲಿಯೇ ಇದ್ದವ. (M) ಮಲ್ಲಾರಿಮೇವುಂಡಿ. ಮಕ್ಕಳ ಪುಸ್ತಕ ಸಾಹಿತ್ಯದ ಮೂಲಕ ಮತ್ತು 'ಶಿವಾನಂದ ಲಹರಿ' ಮೊದಲಾದ ಗ್ರಂಥಗಳನ್ನು ಕನ್ನಡಿಸಿ ಶ್ರೇಷ್ಠ ಸಾಹಿತಿಯಾಗಿ ಪ್ರಸಿದ್ಧಿ ಪಡೆದವ. ಇನ್ನು (G) ಎಂದರೆ ಗೋವಿಂದ ಮಂಗಳೂರ, (B) ಎಂದರೆ ನಾನು ಭಾಲಚಂದ್ರ.

೧೯೨೬ರ ಕೊನೆಗೆ ರಾಷ್ಟ್ರೀಯಶಾಲೆ ನಿಂತುಹೋಗುವವರೆಗೆ ನಾವೆಲ್ಲ ಸ್ನೇಹಿತರು ಕೂಡಿಯೇ ನೆಮ್ಮದಿಯಾಗಿ ಇದ್ದೆವು. ಆ ಬಳಿಕ ಒಬ್ಬೊಬ್ಬರು ಒಂದೊಂದು ಕಡೆಗೆ ಚದುರಿ ಹೋದೆವು. ಮಂಗಳೂರು ಗೋವಿಂದರಾಯ ಹಾಗೂ ನಾನು ಹುಬ್ಬಳ್ಳಿ ಧಾರವಾಡ ಪರಿಸರದಲ್ಲಿಯೇ ಇದ್ದೆವು. ಮನೆತನದಿಂದ ಇಬ್ಬರೂ ಬಡವರು. ಇಬ್ಬರ ಬಾಳು ಬದುಕು-ವ್ಯವಸಾಯಗಳು ಒಂದೇ ಬಗೆಯವಾಗಿದ್ದವು. ಸ್ವತಂತ್ರ ಜೀವನ ನಡೆಸಲು ಏನಾದರೊಂದು ಉದ್ಯೋಗ ಮಾಡಲೇಬೇಕಾಗಿತ್ತು.

ಗೋವಿಂದರಾಯ ಹುಬ್ಬಳ್ಳಿಯಲ್ಲಿ ವೃತ್ತಪತ್ರಿಕೆಗಳ ಮಾರಾಟ ನಡೆಸಿದ್ದ. ನಾನು ಧಾರವಾಡದಲ್ಲಿ ವಿಜಯ, ರಾಜಹಂಸ ಪತ್ರಿಕೆಗಳನ್ನು ಮಾರುತ್ತಿದ್ದೆ. ಗಾಂಧೀಜಿ ಸ್ವಾತಂತ್ರ್ಯ ಹೋರಾಟ ಆರಂಭಿಸಿದೊಡನೆ ನಮ್ಮ ಪತ್ರಿಕೆಯ ಮಾರಾಟದ ಜೊತೆಗೆ 'ಸ್ವಾತಂತ್ರ್ಯ ಸಂಗ್ರಾಮ' ಎಂಬ ಕರಪತ್ರಿಕೆಯನ್ನು ಪೋಲೀಸಿನವರಿಗೆ ತಿಳಿಯದಂತೆ ಗುಟ್ಟಾಗಿ ಪ್ರಸಾರ ಮಾಡುತ್ತಿದ್ದೆವು. ಮುಂದೆ ನಾನು ಇಲ್ಲಿಯ ನಾಯಕರ ಅಪ್ಪಣೆಯ ಮೇರೆಗೆ ೧೯೩೦-೩೨ರ ಅಂಕೋಲಾ ಕರನಿರಾಕರಣೆಯ ಚಳವಳಿಯಲ್ಲಿ ಭಾಗವಹಿಸಲು ಹೋಗಬೇಕಾಯಿತು. ಆಗ ನನ್ನ ಗೋವಿಂದ ರಾಯನ ಸಂಬಂಧ ಕೆಲವು ದಿನ ತಪ್ಪಿತು. ಅಂಕೋಲೆಯಲ್ಲಿ ಏಳೆಂಟು ತಿಂಗಳು ಪೋಲಿಸರ ಕಣ್ಣು ತಪ್ಪಿಸಿ ಕೆಲಸ ಮಾಡಿದರೂ ಕೊನೆಗೊಮ್ಮೆ ಸಿಕ್ಕುಬಿದ್ದು ಕಾರವಾರದ ಮತ್ತು ವಿಜಾಪುರ ಜೇಲುಗಳಲ್ಲಿ ಶಿಕ್ಷೆ ಅನುಭವಿಸಲು ಹೋಗಬೇಕಾಯಿತು. ಜೇಲಿನಲ್ಲಿದ್ದಾಗ ನಾನು ನಾಲ್ಕಾರು ಸಣ್ಣಕಥೆಗಳನ್ನು ಬರೆದಿಟ್ಟಿದ್ದೆ. ೧೯೩೪ರಲ್ಲಿ ಬಿಡುಗಡೆಯಾದ ಬಳಿಕ ಅವುಗಳನ್ನು ಒಂದೊಂದಾಗಿ

ಪ್ರಕಟಿಸಿ ಮಾರಾಟಕ್ಕಾರಂಭಿಸಿದೆ. ಆಗ ಹುಬ್ಬಳ್ಳಿಗೆ ಹೋದಾಗ ಮತ್ತೆ ಮಂಗಳೂರ ಗೋವಿಂದ ರಾಯನ ಭೆಟ್ಟಿ ಆಯಿತು. 'ಶಿವಾನಂದ ಸ್ಟೂಸುಗಳ ನೆರವಿನಿಂದ ಅವನು ಅಲ್ಲಿ 'ಸಾಹಿತ್ಯ ಭಂಡಾರ'ವೆಂಬ ಮಳಿಗೆಯನ್ನು ಆರಂಭಿಸಿದ್ದ. ಅದನ್ನು ಕಂಡು ನನಗೆ ಪರಮಾನಂದವಾಯಿತು. ಗೋವಿಂದರಾಯ ನನ್ನ ಪುಸ್ತಕಗಳನ್ನು ಸಾಕಷ್ಟು ಮಾರಾಟ ಮಾಡಿಕೊಟ್ಟು ನೆರವಾದ.

ನಮ್ಮಿಬ್ಬರ ಗ್ರಹಗಳು ಒಂದೇ ಬಗೆಯವು ಇದ್ದವೋ ಏನೋ! ಧಾರವಾಡದಲ್ಲಿ ಮೊದಲು ಹಲವಾರು ಉದ್ಯೋಗಗಳನ್ನು ನಡೆಸಿದ ನಾನು ಅವನ್ನೆಲ್ಲ ಬಿಟ್ಟು ನನ್ನ ಪುಸ್ತಕಗಳ ಜೊತೆಗೆ ಬೇರೆ ಬೇರೆ ಪ್ರಕಾಶಕರ ಪುಸ್ತಕಗಳನ್ನು ಸಂಗ್ರಹಿಸಿ 'ಸಮಾಜ ಪುಸ್ತಕಾಲಯ'ವನ್ನು ಪ್ರಾರಂಭಿಸಿದೆ. ಶ್ರೀಗಳಾದ ಬೇಂದ್ರೆ, ಆಲೂರ ವೆಂಕಟರಾವ, ಶಂ.ಬಾ. ಜೋಶಿ, ಭಿ.ಪ. ಕಾಳೆ ಮತ್ತು ಬೆಟಗೇರಿ ಕೃಷ್ಣಶರ್ಮಾ ಮೊದಲಾದವರು ತಮ್ಮ ಸಂಗ್ರಹವನ್ನೆಲ್ಲ ನನ್ನಲ್ಲಿ ಮಾರಾಟಕ್ಕೆ ಇಟ್ಟಿದ್ದರಿಂದ ನನ್ನ ಪುಸ್ತಕಾಲಯಕ್ಕೆ ಒಳ್ಳೆ ರಂಗು ಏರಿತು. ಲೈಬ್ರರಿಗಳ ಆರ್ಡರು ಬಂದಾಗ ಮಂಗಳೂರ ಗೋವಿಂದರಾಯ ನನ್ನಲ್ಲಿ ಬಹಳಷ್ಟು ಪುಸ್ತಕಗಳನ್ನು ಒಯ್ದು ಪೂರೈಸುತ್ತಿದ್ದ. ನನಗೆ ದೊಡ್ಡ ಆರ್ಡರುಗಳು ಬಂದಾಗ ಅವನಿಂದ ಪುಸ್ತಕ ತಂದು ಪೂರೈಸುತ್ತಿದ್ದೆ. ಹೀಗಾಗಿ ನಮ್ಮಿಬ್ಬರ ಸ್ನೇಹ ಬೆಳೆಯತೊಡಗಿತು. ಪ್ರತಿಯೊಂದು ಕನ್ನಡ ಸಾಹಿತ್ಯ ಸಮ್ಮೇಲನದಲ್ಲಿ ಗೋವಿಂದರಾಯನ 'ಸಾಹಿತ್ಯ ಭಂಡಾರ'ದ ಮಳಿಗೆಯ ಪಕ್ಕದಲ್ಲಿಯೇ 'ಸಮಾಜ ಪುಸ್ತಕಾಲಯ'ದ ಮಳಿಗೆ. ಇವೆರಡೂ ಸಾಹಿತ್ಯ ಪ್ರೇಮಿಗಳನ್ನು ಆಕರ್ಷಿಸುವಲ್ಲಿ ಹೆಸರುವಾಸಿಯಾಗಿದ್ದವು. ಹೀಗಾಗಿ ನಮ್ಮಿಬ್ಬರ ಸ್ನೇಹ ಸಂಬಂಧ ಬೆಸೆದುಕೊಂಡೇ ಇತ್ತು.

## ಶ್ರೀ ಮ. ಅನಂತಮೂರ್ತಿ, ಹುಬ್ಬಳ್ಳಿ

ನಾವು ಒಟ್ಟು ೫ ಜನ ಮಕ್ಕಳು. ಇಬ್ಬರು ಗಂಡು ಮಕ್ಕಳು, ೩ ಜನ ಹೆಣ್ಣುಮಕ್ಕಳು. ನನ್ನ ಅಣ್ಣ ಗೋವಿಂದರಾಯರು ಎರಡನೆಯವರು. ನನ್ನ ಅಣ್ಣ ಹುಟ್ಟಿದ್ದು ೧೯೦೭ನೇ ಇಸ್ವಿ. ಹಾಗೂ ನಾನು ಹುಟ್ಟಿದ್ದು ೧೯೧೭ನೇ ಇಸ್ವಿಯ ಅನಂತ ಚತುರ್ದಶಿಯಂದು. ನನ್ನ ಅಣ್ಣನವರು ಧಾರವಾಡಕ್ಕೆ ಹೋಗುವ ವೇಳೆಗೆ ರಾಷ್ಟ್ರೀಯ ಚಳುವಳಿ, ಸ್ವಾತಂತ್ರ್ಯಾಂದೋಲನ ಉಗ್ರವಾಗುತ್ತಿದ್ದ ಸಮಯ. ಮೊದಲಿನಿಂದಲೂ ಸ್ವತಂತ್ರ ಪ್ರವೃತ್ತಿಯೊಂದಿಗೆ, ನಿಷ್ಠುರವಾದಿಯಾಗಿದ್ದ ನನ್ನ ಅಣ್ಣ ಅಕ್ಕನ ಮನೆಯಲ್ಲಿ ಹೆಚ್ಚು ದಿನವಿರದೆ ಸ್ವಾತಂತ್ರ್ಯ ಚಳುವಳಿಯಲ್ಲಿ ಪರೋಕ್ಷವಾಗಿ ಭಾಗವಹಿಸುತ್ತ ಜೊತೆಜೊತೆಗೆ ವೃತ್ತಪತ್ರಿಕೆ ಮಾರಾಟ, ಪುಸ್ತಕಗಳ ಮಾರಾಟವನ್ನು ಮಾಡುತ್ತ ತಮ್ಮ ಸಂಪಾದನೆಯನ್ನು ಮಾಡಿಕೊಳ್ಳಲು ಪ್ರಾರಂಭಿಸಿದ್ದರು. ನಾನು ಏನಾದರೂ ಒಂದು ವೃತ್ತಿಯನ್ನು ಕೈಗೊಳ್ಳಬೇಕೆಂದು ನನ್ನನ್ನು ೧೯೩೦ನೇ ಇಸ್ವಿಯಲ್ಲಿ ಧಾರವಾಡಕ್ಕೆ ಕರೆಸಿಕೊಂಡರು. ಆ ವೇಳೆಯಲ್ಲಿ ಒಂದು ವರ್ಷ ನಾನು ಅರಸಿಕೆರೆಯಲ್ಲಿ ಒಂದು ಹೋಟೆಲಿನಲ್ಲಿ ಕೆಲಸ ಮಾಡಿಕೊಂಡಿದ್ದೆ. ಇಲ್ಲಿಗೆ ಬಂದ ನಂತರ ನನ್ನನ್ನು ಕರ್ನಾಟಕ ಹೈಸ್ಕೂಲಿಗೆ ಸೇರಿಸಿದರು. ನಾನು ಒಂದೆರಡು ವರ್ಷ ವಾರಾನ್ನ ಮಾಡಿಕೊಂಡು ಓದುತ್ತಿದ್ದೆ. ನಾವು ಧಾರವಾಡ ಪ್ರೋತ್ತೀಸ್ ಗಲ್ಲಿಯಲ್ಲಿ ಒಂದು ಸಣ್ಣ ಮನೆ ಮಾಡಿಕೊಂಡಿದ್ದೆವು.

ನಂತರ ನನ್ನ ಅಣ್ಣನವರು ಧಾರವಾಡದಲ್ಲಿ ಕೆಲವು ಮಿತ್ರರ ಜೊತೆ ಸಹಭಾಗಿಯಾಗಿ ೧೯೩೨ರಲ್ಲಿ 'ಕರ್ನಾಟಕ ಸಾಹಿತ್ಯ ಮಂದಿರ'ವನ್ನು ಪ್ರಾರಂಭಿಸಿದರು. ನನ್ನ ಅಣ್ಣನವರು ಅಂಗಡಿಯಲ್ಲಿ ಇರದೆ ಪುಸ್ತಕಗಳನ್ನು ಹೊತ್ತುಕೊಂಡು ಊರೂರು ತಿರುಗಿ ಮಾರಿ ಬರುತ್ತಿದ್ದರು. ನಡುವೆ ಒಂದೆರಡು ಸಾರಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುತ್ತಿದ್ದುದರ ಪರಿಣಾಮವಾಗಿ ಪೋಲೀಸರಿಂದ ಸೆರೆಯಾಗುವ ಸಂದರ್ಭ ಬಂದಾಗ ಹೇಗೋ ತಪ್ಪಿಸಿಕೊಂಡು ದಾವಣಗೆರೆಯಲ್ಲಿ ಸ್ವಲ್ಪ ದಿನವಿದ್ದು ಬಂದರು. ಅವರು ದಾವಣಗೆರೆಯಲ್ಲಿದ್ದಾಗಲೇ ಗಾಂಧೀಜಿಯವರ 'ನನ್ನ ಆರಂಭ ಜೀವನ' ಕೃತಿಯನ್ನು ಕನ್ನಡಿಸಿದರು. ೧೯೩೨ನೇ ಇಸ್ವಿಯಲ್ಲಿ ರಾಯಚೂರಿನಲ್ಲಿ ನಡೆದ ೨೦ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರಥಮವಾಗಿ ಕನ್ನಡ ಪುಸ್ತಕಗಳ ಮಾರಾಟ-ಪ್ರದರ್ಶನ ಮಾಡಿದರು. ಅಲ್ಲಿಂದ ಧಾರವಾಡಕ್ಕೆ ಬಂದ ನನ್ನ ಅಣ್ಣ ಸ್ವಲ್ಪ ದಿನಗಳಲ್ಲಿಯೇ ಕರ್ನಾಟಕ ಸಾಹಿತ್ಯ ಮಂದಿರದಿಂದ, ಕಾರಣಾಂತರಗಳಿಂದ ನಿರ್ಗಮಿಸಬೇಕಾಯಿತು. ಮುಂದೆ ಹುಬ್ಬಳ್ಳಿಯಲ್ಲಿದ್ದ 'ಸಾಹಿತ್ಯ ಭಂಡಾರ'ವನ್ನು ನಡೆಸ ತೊಡಗಿದ್ದುದು ತಿಳಿದ ವಿಷಯ.

ನಾನು ಈವರೆಗೆ ನಿವೇದಿಸಿರುವುದು ನನ್ನ ಅಣ್ಣನ ಹೋರಾಟಮಯ ತಾರುಣ್ಯ ಜೀವನದ ಸಂಕ್ಷಿಪ್ತ ರೂಪ ಮಾತ್ರ. ೧೯೩೩ನೇ ಇಸ್ವಿಯಲ್ಲಿ ಹುಬ್ಬಳ್ಳಿಯಲ್ಲಿ 'ಸಾಹಿತ್ಯ ಭಂಡಾರ' ಸ್ಥಾಪಿಸುವವರೆಗೆ ಅವರು ಪಟ್ಟ ಕಷ್ಟ, ಹೋರಾಟದ ವಿವಿಧ ಮಜಲುಗಳ ಪೂರಾ ಪರಿಚಯ ನನಗಿಲ್ಲ. ನಾನು ಅವರೊಂದಿಗೆ ಬಂದು ಸೇರುವ ವೇಳೆಗಾಗಲೇ ಅವರ ಹೋರಾಟಮಯ ಜೀವನದ ಅನೇಕ ವರ್ಷಗಳೇ ಕಳೆದುಹೋಗಿದ್ದವು. ಇಷ್ಟಾದರೂ ಅವರು ಧೃತಿಗೆಡದೆ, ಯಾವುದಕ್ಕೂ ಹಿಂಜರಿಯದೆ ಬಂದದ್ದನ್ನು ಬಂದಂತೆಯೇ ಅನುಭವಿಸಿದ ವ್ಯಕ್ತಿ ಎಂಬುದನ್ನು ಕಂಡಿದ್ದೆ. ಧಾರವಾಡದ ನಮ್ಮ ಹಿರಿಯ ಅಕ್ಕನ ಸಂಸಾರ ಹಾಗೂ ಹೂವಿನಹಡಗಲಿಯಲ್ಲಿದ್ದ ಎರಡನೆಯ ಅಕ್ಕನ ಸಂಸಾರಗಳ ಏಳಿಗೆಗೆ ತಮ್ಮ ಕೈಲಾದ ನೆರವನ್ನು ಅಣ್ಣನವರು ನೀಡಿದ್ದಾರೆ. ಕಷ್ಟವೇ ಅವರ ಜೀವನವಾಗಿದ್ದರಿಂದ ಇನ್ನೊಬ್ಬರ ಕಷ್ಟಕ್ಕೆ ಸ್ಪಂದಿಸುವಲ್ಲಿ ಯಾವುದೇ ಹಿಂಜರಿಕೆ, ಬೇಸರ ಮಾಡಿಕೊಳ್ಳುತ್ತಿರಲಿಲ್ಲ. ಸ್ವಭಾವದಲ್ಲಿ ಅಣ್ಣನದು ಸ್ವಲ್ಪ ಸಿಟ್ಟು, ನಿಷ್ಠುರತೆ ಇದ್ದರೂ ಕೊನೆಯವರೆಗೂ ಸೂಕ್ತ ಮಾರ್ಗದರ್ಶನ ನೀಡಿ, ಬುದ್ಧಿವಾದ ಹೇಳಿ ನನ್ನ ಬದುಕನ್ನು ರೂಪಿಸಿದರು.

೧೯೪೯ರಲ್ಲಿ ನನ್ನ ಅಣ್ಣನವರು ಪುಸ್ತಕ ಪ್ರಕಾಶನ, ಮಾರಾಟ ವ್ಯವಸ್ಥೆಯನ್ನು ಇನ್ನೂ ವಿಸ್ತರಿಸುವ ಉದ್ದೇಶದಿಂದ ಬೆಂಗಳೂರಿನ ರಾಷ್ಟ್ರೀಯ ವಿದ್ಯಾಲಯ ಬೀದಿಯ ತಮ್ಮ ಅತ್ತೆಯ ಮನೆಯಲ್ಲಿಯೇ ಸಣ್ಣದಾಗಿ 'ಸಾಹಿತ್ಯ ಭಂಡಾರ'ದ ಅಂಗಡಿ ಪ್ರಾರಂಭಿಸಿದರು. ನಂತರ ಬಳೆ ಪೇಟೆಯ ಜಂಗಮಮೇಸ್ತ್ರಿ ಗಲ್ಲಿಯಲ್ಲಿ ಈ ಅಂಗಡಿ ಪ್ರಾರಂಭಿಸಿದ್ದು ಅದು ಇಂದಿಗೂ ಅಲ್ಲಿಯೇ ಇದೆ. ಆಗ ಆ ಅಂಗಡಿ ಕಟ್ಟಡದ ಮಾಲೀಕರಾಗಿದ್ದ ಶ್ರೀ ಟಿ. ನಾರಾಯಣ ಅಯ್ಯಂಗಾರ್ ಅವರು ನಮ್ಮ ಅಣ್ಣನ ಪ್ರಾಮಾಣಿಕತೆ, ಕಷ್ಟ ಸಹಿಷ್ಣುತೆ ಕಂಡು, 'ತಾವಿರುವ ತನಕ ಗೋವಿಂದರಾಯರನ್ನು ಈ ಅಂಗಡಿಯಿಂದ ಬೇರ್ಪಡಿಸಲು ಬಿಡುವುದಿಲ್ಲ' ಎಂದು ನನ್ನ ಮುಂದೊಮ್ಮೆ ಹೇಳಿದ್ದರು.

ಧಾರವಾಡದ ರಾಷ್ಟ್ರೀಯ ಶಾಲೆಯಲ್ಲಿ ಓದುವಾಗಲೇ ಕವಿವರ್ಯ ದ.ರಾ. ಬೇಂದ್ರೆಯವರಿಂದ ಕನ್ನಡ ದೀಕ್ಷೆ ಪಡೆದಿದ್ದ ನನ್ನ ಅಣ್ಣ ಅದನ್ನು ತಮ್ಮ ಜೀವಿತದ ಕೊನೆಯವರೆಗೂ

ಪಾಲಿಸಿಕೊಂಡು ಬಂದರು. ದ.ರಾ. ಬೇಂದ್ರೆಯವರನ್ನು ಹುಬ್ಬಳ್ಳಿಯ ನಮ್ಮ ಅಂಗಡಿಗೆ ಆಹ್ವಾನಿಸಿ ಅಂಗಡಿಯ ಅಟ್ಟದ ಮೇಲೆ ಅವರಿಗೆ ಎಲ್ಲ ವ್ಯವಸ್ಥೆ ಮಾಡಿಕೊಟ್ಟು, ಅವರಿಂದ ಏಕಾಂಕ ನಾಟಕಗಳ ಸಂಕಲನವಾದ 'ಹುಚ್ಚಾಟಗಳು' ಎಂಬ ಕೃತಿಯನ್ನು ಬೆನ್ನುಹತ್ತಿ ಬರೆಸಿದರು. ಈ ಕೃತಿ ಮೂಡಿದ್ದು ನಮ್ಮ ಅಂಗಡಿಯಲ್ಲೇ ಹಾಗೂ ಅದರ ಪ್ರಕಾಶನವೂ ನಮ್ಮದ್ದೇ ಆಗಿತ್ತು. ಕನ್ನಡ ಕಾದಂಬರಿಗಳ ಪಿತಾಮಹ ಗಳಗನಾಥರೊಡನೆ ನನ್ನ ಅಣ್ಣನ ಸಂಬಂಧ ಬಹಳ ಚೆನ್ನಾಗಿತ್ತು. ಅವರ ೨-೩ ಕಾದಂಬರಿಗಳನ್ನು ನಮ್ಮ ಸಂಸ್ಥೆಯಿಂದಲೇ ಪ್ರಕಾಶನ ಮಾಡಿದ್ದೂ ಅಲ್ಲದೆ ಅವರ ಅನೇಕ ಕೃತಿಗಳನ್ನು ಮಾರಾಟ ಮಾಡುತ್ತಿದ್ದರು. ಗಳಗನಾಥರೂ ಕೂಡ ವ್ಯವಹಾರದಲ್ಲಿ ಪ್ರಾಮಾಣಿಕತೆ, ಸತ್ಯ ನಿಷ್ಠುರತೆ ಇದ್ದವರು. ಪ್ರಕಾಶಕರಾಗಿ ನನ್ನ ಅಣ್ಣನವರು ನಡೆದುಕೊಂಡ ರೀತಿ, ನೀತಿ ಇಂದಿಗೂ ಆದರ್ಶಪ್ರಾಯವಾಗಿದೆ.

ಒಬ್ಬ ಕೃತಿಕಾರ ಒಂದು ಹಸ್ತಪ್ರತಿ ತಂದುಕೊಟ್ಟರೆ ಅದನ್ನು ಸಾರಾಸಗಟಾಗಿ ಪ್ರಕಾಶಿಸದೆ ಮೊದಲು ಅದನ್ನು ಆಮೂಲಾಗ್ರವಾಗಿ ಓದಿ, ಪರಿಶೀಲಿಸಿ, ಅದರಲ್ಲೇನಾದರೂ ತಪ್ಪುಗಳಿದ್ದರೆ ಲೇಖಕರ ಗಮನಕ್ಕೆ ತಂದು ಬದಲಾಯಿಸಿ ಪ್ರಕಟಣೆಗೆ ಒಪ್ಪುತ್ತಿದ್ದರು. ಇಲ್ಲದಿದ್ದಲ್ಲಿ ನೇರವಾಗಿ ಅವರಿಗೆ ಹಸ್ತಪ್ರತಿ ವಾಪಸ್ ಮಾಡಿ 'ಬೇರೆ ಎಲ್ಲಾದರೂ ಪ್ರಕಟಿಸಿ, ಸುಮ್ಮನೆ ನಮಗೂ ಶ್ರಮ, ನಿಮಗೂ ಶ್ರಮ' ಎಂದು ಹೇಳುತ್ತಿದ್ದುದೂ ಉಂಟು. ಹಸ್ತಪ್ರತಿ ಸ್ವೀಕೃತವಾದರೆ ಅದರ ಕರಡು ತಿದ್ದುವುದರಿಂದ ಹಿಡಿದು ಮುದ್ರಣವಾಗಿ ಹೊರಬರುವ ಕೊನೆಯ ಹಂತದ ವರೆಗೂ ಮುತುವರ್ಜಿಯಿಂದ ನೋಡಿಕೊಳ್ಳುತ್ತಿದ್ದರು. ವ್ಯಾಕರಣ ದೋಷಗಳಿರಬಾರದು; ಪುಸ್ತಕಗಳನ್ನು ಬಹಳ ಕಾಲದವರೆಗೆ ರಕ್ಷಣೆ ಕೊಡುವಂತಹ ಕಾಗದಗಳ ಉಪಯೋಗ, ಅನಾವಶ್ಯಕ ದುಂದುವೆಚ್ಚದ ಬಳಕೆಯನ್ನು ತಗ್ಗಿಸುವುದು, ಸಣ್ಣಪುಟ್ಟ ತಪ್ಪನ್ನೂ ಗಮನಿಸಿ ಸರಿಪಡಿಸುವುದು, ಇದೆಲ್ಲ ಅವರ ವೈಶಿಷ್ಟ್ಯವಾಗಿತ್ತು. ಪುಸ್ತಕಗಳ ಪುಟಗಳನ್ನು ಅನಾವಶ್ಯಕವಾಗಿ ಬೆಳೆಯಲು ಬಿಡದೆ, ತಾವೇ ಸ್ವಂತ ನಿಂತು ಪರಿಶೀಲಿಸುತ್ತಿದ್ದರು. ನನ್ನ ಅಣ್ಣನವರು ತಮ್ಮ ವೃತ್ತಿಜೀವನದ ಕೊನೆಯವರೆಗೂ ಯಾವ ಲೇಖಕರನ್ನೂ ಅವರ ಬರಹಗಳ ಮುದ್ರಣ-ಪ್ರಕಾಶನದ ಬಗ್ಗೆ ಕೇಳುತ್ತಿರಲಿಲ್ಲ. ಲೇಖಕರು ತಾವಾಗಿ ಇವರಲ್ಲಿಗೆ ಬಂದಾಗ ಮೊದಲು ಹಸ್ತಪ್ರತಿ ಕೊಡಿ. ಅದನ್ನು ಪರಿಶೀಲಿಸಿ ನಂತರ ಮುಂದುವರೆಯೋಣವೆಂದು ಹೇಳಿ ಕಳುಹಿಸುತ್ತಿದ್ದರು. ನಮ್ಮ ಅಣ್ಣನವರ ಸಮಕಾಲೀನ ಸಾಹಿತ್ಯ ಪ್ರಕಾಶಕರಾಗಿದ್ದ 'ಮನೋಹರ ಗ್ರಂಥಮಾಲೆ'ಯ ಶ್ರೀ ಜಿ.ಬಿ. ಜೋಷಿ ಹಾಗೂ ದ.ಬಾ. ಕುಲಕರ್ಣಿ ಮತ್ತು ಇನ್ನಿತರ ಪ್ರಕಾಶಕರ ಜೊತೆಗೂ ಸುಮಧುರ ವ್ಯವಹಾರ ಸಂಬಂಧವಿತ್ತು. ಡಾ॥ ನಾ.ಸು. ಹರ್ಡೀಕರ್ ಅವರು ನಮ್ಮ ಹುಬ್ಬಳ್ಳಿಯ ಅಂಗಡಿಗೆ ಮೇಲಿಂದ ಮೇಲೆ ಬರುತ್ತಿದ್ದರು. ಅವರಿಗೂ ನನ್ನ ಅಣ್ಣನಿಗೂ ಮಧುರ ಬಾಂಧವ್ಯ ವಿತ್ತು. ಅವರ ಬಗ್ಗೆ ಹೊರತಂದ ಪುಸ್ತಕವೇ ನಮ್ಮ ಮೊದಲ ಪ್ರಕಾಶನ. ಅದರಂತೆ 'ಸಂಯುಕ್ತ ಕರ್ನಾಟಕ'ದ ಮೊಹರೆ ಹನುಮಂತರಾಯರು, ಪ.ರಾ. ಪುರೋಹಿತರು ನಮ್ಮ ಅಂಗಡಿಗೆ ಮೇಲಿಂದ ಮೇಲೆ ಬಂದು ನಮ್ಮ ಅಣ್ಣನ ಜತೆಗೆ ಚರ್ಚೆಯಲ್ಲಿ ಪಾಲ್ಗೊಳ್ಳುತ್ತಿದ್ದರು.

ನಮ್ಮ ಅಣ್ಣನವರು ಅಂಗಡಿ ಪ್ರಾರಂಭಿಸಿದ್ದು ಕೇವಲ ಕನ್ನಡ ಸಾಹಿತ್ಯ, ಸಂಸ್ಕೃತಿಗೆ ಸಂಬಂಧಿಸಿದ ಪುಸ್ತಕಗಳ ಪ್ರಕಾಶನ ಮತ್ತು ಮಾರಾಟ ವ್ಯವಸ್ಥೆಗೆ ಮಾತ್ರ. ಕನ್ನಡದ ಹೊರತು

ಬೇರೆ ಭಾಷೆಯ ಪುಸ್ತಕಗಳನ್ನು ಪ್ರಕಟಿಸಲಿಲ್ಲ, ಮಾರಾಟವನ್ನೂ ಮಾಡಲಿಲ್ಲ. ಕನ್ನಡಕ್ಕೆ ಸಂಬಂಧಿಸಿದ ಪಠ್ಯಪುಸ್ತಕಗಳನ್ನು ಕೂಡ ಮಾರಾಟಕ್ಕಾಗಲಿ ಇಡಲಿಲ್ಲ ಮತ್ತು ಪ್ರಕಾಶನವನ್ನೂ ಮಾಡಲಿಲ್ಲ. ಪಠ್ಯಪುಸ್ತಗಳಿಗಾದರೆ ಅವರಿವರಲ್ಲಿ ಹೋಗಿ ಮೇಲಿನವರ ಮರ್ಜಿ ಸಂಪಾದಿಸಬೇಕು, ಲಂಚ-ರುಶುವತ್ತು ಕೊಡಬೇಕಾಗಬಹುದೆಂಬ ಭಾವನೆಯಿಂದ ನಮ್ಮ ಅಣ್ಣ ಸ್ವತಂತ್ರವಾಗಿಯೇ, ಲೇಖಕರು ತಾವಾಗಿ ತಂದುಕೊಟ್ಟ ಕೃತಿಗಳನ್ನು ಪರಿಶೀಲಿಸಿ ಪ್ರಕಟಿಸುತ್ತಿದ್ದರು. ಇಲ್ಲಿ ಇನ್ನೊಂದು ಮಾತನ್ನು ಹೇಳಬೇಕು. ನನ್ನ ಅಣ್ಣಂದಿರು ಕೇವಲ ಡಾ|| ಎಸ್.ಎಲ್. ಭೈರಪ್ಪನವರ ಕಾದಂಬರಿಗಳನ್ನೇ ಪ್ರಕಾಶಿಸಿದ್ದಾರೆ, ಉಳಿದವರದ್ದು ಕಡಿಮೆ ಎಂಬ ಭಾವನೆ ಸಾಹಿತ್ಯಕ ವಲಯದಲ್ಲಿರಬಹುದು. ಭೈರಪ್ಪನವರಾದರೂ ಮೊದಲಿನಿಂದ ನಮ್ಮ ಅಣ್ಣಂದಿರಿಂದಲೇ ತಮ್ಮ ಕಾದಂಬರಿಗಳನ್ನು ಪ್ರಕಾಶನಪಡಿಸಿದ್ದಾರೆ. ಅಲ್ಲದೇ ಬೇರೆ ಕೆಲವು ಪ್ರಕಾಶಕರು ಅವರನ್ನು ಒತ್ತಾಯಿಸಿದ್ದರೂ ಕೂಡ ನಮ್ಮ ಅಣ್ಣಂದಿರ ವ್ಯಾವಹಾರಿಕ ಪ್ರಾಮಾಣಿಕತೆ, ಕಾರ್ಯತತ್ಪರತೆ ಅವರಿಗೆ ಮೆಚ್ಚಿಗೆ ಆಗಿರಬಹುದು. ಹಾಗಾಗಿ ಇಂದಿಗೂ ನಮ್ಮ ಸಂಸ್ಥೆಯಿಂದಲೇ ತಮ್ಮ ಕೃತಿಗಳನ್ನು ಪ್ರಕಾಶನಪಡಿಸಿಕೊಳ್ಳುತ್ತಿದ್ದಾರೆ. ಈ ಹೊರತು ಬೇರೆ ಕಾರಣಗಳಿಲ್ಲ. ನಾಡಿನ ಹೆಸರಾಂತ ಕವಿಗಳ, ಕಾದಂಬರಿಕಾರರ, ವಿಮರ್ಶಕರ ಕೃತಿಗಳನ್ನು ಕೂಡ ನಮ್ಮ ಅಣ್ಣಂದಿರು ಪ್ರಕಟಿಸಿದ್ದಾರೆ. ನಾಡಿನ ಹೆಸರಾಂತ ಆಯುರ್ವೇದ ವೈದ್ಯರಾಗಿದ್ದ, ಡಾ|| ಎಂ. ಗೋಪಾಲಕೃಷ್ಣರಾಯರ ಎಲ್ಲಾ ಕೃತಿಗಳನ್ನೂ ನಮ್ಮ ಅಣ್ಣಂದಿರೇ ಪ್ರಕಟಿಸಿದ್ದಾರೆ.

ನನ್ನ ಅಣ್ಣಂದಿರು ನನ್ನ ವಿಷಯದಲ್ಲಿ ಮೊದಲಿನಿಂದಲೂ ವಾತ್ಸಲ್ಯ ತೋರಿ, ನನಗೆ ಜೀವನಾಧಾರವಾಗಿದ್ದರು. ಅವರು ಯಾವುದೇ ಅಹಿತಕರ ಸಂದರ್ಭಗಳಲ್ಲೂ ಬೇಸರ ಮಾಡಿಕೊಂಡಿಲ್ಲ. ಒಮ್ಮೊಮ್ಮೆ ಕೆಲವು ವಿಷಯಗಳ ಬಗ್ಗೆ ಬೇಸರ, ಅಸಹನೆ ತೋರಿಸಿರಬಹುದಾದರೂ ಅದು ಅಷ್ಟು ಗಣನೀಯ ವಿಚಾರವಾಗಿರಲಿಲ್ಲ. ಆದರೆ ಇತ್ತೀಚಿನ ವರ್ಷಗಳಲ್ಲಿ ನಮ್ಮ ಮಕ್ಕಳ ವ್ಯವಹಾರಗಳ ಬಗ್ಗೆ ಸ್ವಲ್ಪ ಬೇಸರ ಮಾಡಿಕೊಂಡಿದ್ದುಂಟು. ಅದನ್ನು ಸರಿಪಡಿಸಲು ಪ್ರಯತ್ನವನ್ನು ಮಾಡಿದರು, ಆದರೆ ಆಗಲಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ, ನನ್ನ ಅಣ್ಣಂದಿರು ನಾಡಿನ ಕುಗ್ರಾಮದಿಂದ ಹೊರಟು, ನಾಡಿನೆಲ್ಲೆಡೆ ಸಂಚರಿಸಿ, ಕಷ್ಟ ಕಾರ್ಪಣ್ಯಗಳನ್ನು ಎದುರಿಸಿ ಅನೇಕರಿಗೆ ಜೀವನಕ್ಕೆ ಆಸರೆ, ಸಹಾಯ ಕಲ್ಪಿಸಿಕೊಟ್ಟು ಹೋಗಿದ್ದಾರೆ. ಹೂವಿನ ಜೊತೆಗೆ ನಾರೂ ಸ್ವರ್ಗಕ್ಕೆ ಹೋಗುವಂತೆ ನಾನು ಕೇವಲ ನಾರಿನಂತೆ ಅವರು ನೀಡಿದ ಮಾರ್ಗದರ್ಶನದಡಿಯಲ್ಲಿ ಸಾಗಿ ಬಂದಿದ್ದೇನೆ. ಇದೇ ನನಗೆ ತೃಪ್ತಿ.

**ಶ್ರೀ ಕೆ.ಎಸ್. ವೆಂಕಟರಾಂ,** ಬೆಂಗಳೂರು

ಗೋವಿಂದರಾಯರು ನಮ್ಮ ತಂದೆಯ ಸ್ವಂತ ತಂಗಿಯ ಮಗ. ಸುಮಾರು ೧೯೩೨-೩೩ರಲ್ಲಿ ಅವರು ಬಾಣಾವರ(ಅರಸೀಕೆರೆ ತಾಲೂಕು)ದ ನಮ್ಮ ಮನೆಗೆ ಬಂದಾಗ ಅವರ ಬೆರಳು ಹಿಡಿದು ಸಂಭ್ರಮದಿಂದ ಕುಣಿದದ್ದು ನನಗೆ ನೆನಪಿದೆ. ಆದರೆ ೮-೯ ವರ್ಷದ ಹುಡುಗನಾಗಿದ್ದ ನಾನು ಅವರ ಬಗ್ಗೆ ಯಾವ ಅಭಿಪ್ರಾಯ ಹೊಂದಲೂ ಅಸಮರ್ಥನಾಗಿದ್ದೆ.

ಅದಾದ ನಂತರ ನಾನು ಅವರನ್ನು ನೋಡಿದ್ದು ೧೯೪೨ರ ಆಗಸ್ಟ್ ಕ್ರಾಂತಿಯ ಸಂದರ್ಭದಲ್ಲಿ. ನಾನಾಗ ದಾವಣಗೆರೆಯಲ್ಲಿ ಓದುತ್ತಿದ್ದೆ. ನಮ್ಮ ಸ್ಕೂಲಿನ ಹಾಸ್ಟೆಲ್ ಮೇಲೆ ನಡುರಾತ್ರಿ ಪೋಲಿಸರು ಧಾಳಿ ಮಾಡಿ ಕೈಗೆ ಸಿಕ್ಕವರನ್ನು ಥಳಿಸಿದರು. ಕೆಲವರನ್ನು ಹಿಡಿದೊಯ್ದರು. ಕೆಲವರು ಏಟು ತಿಂದು ತಪ್ಪಿಸಿಕೊಂಡರು. ಆ ಪೈಕಿ ನಾನೂ ಒಬ್ಬ. ಸ್ಕೂಲು ಮತ್ತು ಹಾಸ್ಟೆಲ್ ಮುಚ್ಚಿದವು. ಬರೀ ಖಾದಿಧಾರಿಯಾಗಿದ್ದ ನಾನು ಎಲ್ಲಿ ಹೋದರೂ ಪೋಲಿಸರಿಂದ ಏಟು ತಿನ್ನುತ್ತಿದ್ದೆ. ಕಡೆಗೆ ಮೈಸೂರು ಸಂಸ್ಥಾನವನ್ನೇ ಬಿಟ್ಟು ಹುಬ್ಬಳ್ಳಿಗೆ ರಾಯರ ಮನೆಗೆ ಹೋದೆ. ನನ್ನ ಖಾದಿ ಬಟ್ಟೆ ಮತ್ತು ನಾನು ಪಟ್ಟಕಷ್ಟಕ್ಕೆ ರಾಯರು ಮರುಗಿದರು. 'ಇಲ್ಲಿಯೇ ಇರು. ಎಲ್ಲಿಯಾದರೂ ನೌಕರಿ ಹುಡುಕೋಣ' ಎಂದು ಧೈರ್ಯವಿತ್ತರು. ಮುಂದೆ ೨-೩ ದಿನಗಳಲ್ಲಿ ನಾನು ಗೋವಿಂದರಾಯರು ಬೇಡ ಎಂದರೂ ಹುಬ್ಬಳ್ಳಿ ಬಿಟ್ಟುಹೋದೆ. ನನ್ನ ವಿಧಿ ನನ್ನನ್ನು ಎಲ್ಲೆಲ್ಲಿಗೊ ಒಯ್ದಿತು.

ಇದಾದ ನಂತರ ನಾನು ರಾಯರನ್ನು ಭೇಟಿಯಾದದ್ದು ೧೯೪೪ರಲ್ಲಿ. ಉಪವಾಸ, ವನವಾಸ, ಪೋಲೀಸರಿಂದ ಏಟು ತಿಂದು ಬವಣೆ ಪಟ್ಟಿದ್ದ ನಾನು ದಿಢೀರನೆ ಮಿಲಿಟರಿಗೆ ಸೇರಿದ್ದೆ. ನನ್ನನ್ನು ಮಿಲಿಟರಿ ಯೂನಿಫಾರ್ಮ್‌ನಲ್ಲಿ ನೋಡಿದ ರಾಯರಿಗೆ ನನ್ನ ಮೇಲೆ ತೀವ್ರ ಅಸಮಾಧಾನವಾಯಿತು. ಈ ಬಗೆಯ, ಖಾದಿಯಿಂದ ಖಾಕೀಗೆ ಪರಿವರ್ತನೆಯನ್ನು ಅವರು ನಿರೀಕ್ಷಿಸಿರಲಿಲ್ಲ. ಒಳ್ಳೆಯ ಮಾತಿನಲ್ಲಿಯೇ ನನ್ನನ್ನು ಚೆನ್ನಾಗಿ ಬಯ್ದರು. 'ಬ್ರಿಟಿಷ್ ಸಾಮ್ರಾಜ್ಯದ ಅತ್ಯಂತ ಕ್ರೌರ್ಯದ ಪ್ರತೀಕ, ಭಾರತ ಮಾತೆಯನ್ನು ತುಳಿದಿಟ್ಟಿರುವ ಪಾಶವಿ ಶಕ್ತಿಯಾದ ಮಿಲಿಟರಿಯನ್ನೇಕೆ ಸೇರಿದೆ? ಬೇರೆ ಎಲ್ಲಿಯೂ ನೌಕರಿ ಸಿಗಲಿಲ್ಲವೇ? ಇದರಿಂದ ನೀನು ಬ್ರಿಟಿಷ್ ಸಾಮ್ರಾಜ್ಯಶಾಹಿಯ ಗುಲಾಮನಾದೆ, ಭಾರತಮಾತೆಗೆ ಮೋಸ ಮಾಡಿದೆ' ಇತ್ಯಾದಿ ನುಡಿದರು.

ಪರಿಸ್ಥಿತಿಯ ಕೈಗೊಂಬೆಯಾಗಿದ್ದ ನನಗೆ, ಒಂದೋ ಉಪವಾಸಮರಣ, ಇಲ್ಲವೇ ಮಿಲಿಟರಿ ಬಿಟ್ಟು ಬೇರೆ ದಾರಿ ಇರಲಿಲ್ಲ. ಅಲ್ಲದೇ ಇಂದಲ್ಲ ನಾಳೆ ಸ್ವಾತಂತ್ರ್ಯ ಬಂದೇ ಬರುತ್ತದೆ. ಆಗ ದೇಶ ರಕ್ಷಿಸಲು ಸೈನ್ಯ ಬೇಕು. ನಿಮಗೆ ಹೊಚ್ಚ ಹೊಸ ಸೈನ್ಯ ಕಟ್ಟಲು ಸಾಧ್ಯವಿಲ್ಲ. ಇರುವ ಸೈನ್ಯದ ಆಧಾರದ ಮೇಲೆಯೇ ಸ್ವತಂತ್ರ ಸೈನ್ಯವನ್ನು ರಚಿಸಬೇಕಾಗುತ್ತದೆ ಇತ್ಯಾದಿ ನನ್ನ ಯಾವ ತರ್ಕವೂ ರಾಯರ ಮೇಲೆ ಪರಿಣಾಮ ಉಂಟುಮಾಡಲಿಲ್ಲ. ತಮ್ಮ ಅಚ್ಚಿನಲ್ಲಿಯೇ ಬೆಳೆದ ಅವರಿಗೆ ಅಭಿಪ್ರಾಯ ಬದಲಿಸುವುದು ಅಸಾಧ್ಯವಾಗಿತ್ತು.

ಆದರೆ ೧೯೪೭ ಆಗಸ್ಟ್ ೧೫ರ ನಂತರ ರಾಯರ ಅಭಿಪ್ರಾಯ ತಕ್ಷಣ ಬದಲಾಯಿಸಿತು. 'ನಿನಗೆ ಹಿಂದೆ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಒಳ್ಳೆಯ ಅವಕಾಶ ಲಭಿಸಿದೆ. ಭಾರತಮಾತೆಯ ಸೇವೆ ಚೆನ್ನಾಗಿ ಮಾಡಿ ಧನ್ಯನಾಗು' ಎಂದು ಹೇಳಿದರು. ೧೯೪೭-೪೮ರಲ್ಲಿ ನಡೆದ ಕಾಶ್ಮೀರ ಯುದ್ಧ, ೧೯೪೮ರಲ್ಲಿ ನಿಜಾಮನ ಮೇಲೆ ಪೋಲೀಸ್ ಕಾರ್ಯಾಚರಣೆ, ೧೯೬೧ರ ಗೋವೆ ಯುದ್ಧ ೧೯೬೨ರಲ್ಲಿ ಚೈನಾ ಯುದ್ಧ ೧೯೭೧ರ ಬಂಗ್ಲಾದೇಶ ಯುದ್ಧಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದ ನಾನು ಆಗಾಗ ರಜೆಯಲ್ಲಿ ಬಂದಾಗ ಎಲ್ಲವನ್ನು ರಾಯರಿಗೆ ವರ್ಣಿಸುತ್ತಿದ್ದೆ. ಭಾರತ ಸೈನ್ಯದ ಮೇಲೆ ಅವರ ಅಭಿಮಾನ ಹೆಚ್ಚುತ್ತಿತ್ತು.

ಒಮ್ಮೆ ರಜೆಯಲ್ಲಿ ಬಂದಾಗ (೧೯೬೫) ನಾನು ಅವರಿಂದ ೩೦ ರೂ. ಕೈಗಡ ಪಡೆದಿದ್ದೆ. ಆದರೆ ೧೯೬೫ರ ಕಚ್ ಯುದ್ಧದಲ್ಲಿ ಮಗ್ನನಾಗಿದ್ದಾಗ ಸಾಲದ ನೆನಪು ಬರಲಿಲ್ಲ. ಸುಮಾರು ೧೯೭೨ನೇ ಇಸವಿಯಲ್ಲಿ ನನಗೆ ನೆನಪು ಬಂತು. ಆಗ ಸಾಲ ತೀರಿಸಲು ಹೋದಾಗ ಅವರು, ಅದನ್ನು ನೀನು ನನಗೆ ಇಂಥ ಊರಿನಲ್ಲಿ ಇಂತಹ ಸಂದರ್ಭದಲ್ಲಿ ತೀರಿಸಿದ್ದೀಯ, ಎಂದು ಹೇಳಿದರು. ನನಗೆ ಸಾಲ ತೀರಿಸಿದ ನೆನಪಿಲ್ಲ, ನೀನು ಸುಳ್ಳು ಹೇಳುತ್ತಿದ್ದೀಯ, ಎಂದು ಒತ್ತಾಯ ಮಾಡಿದರೂ ತೆಗೆದುಕೊಳ್ಳಲಿಲ್ಲ. ಪರರ ಸ್ವತ್ತಿಗೆ ರಾಯರು ಎಂದೂ ಆಸೆಪಟ್ಟವರಲ್ಲ.

ರಾಯರು ತುಂಬ ಹಾಸ್ಯಜೀವಿಗಳು. ಒಂದು ದಿನ ನಾನು ಅವರ ಮನೆಗೆ ಹೋದಾಗ ಒಳಗೆ ಯಾರೂ ಇದ್ದಂತೆ ಕಾಣಲಿಲ್ಲ. ಬಾಗಿಲಲ್ಲಿ ನಿಂತು, ಒಳಗೆ ಯಾರಾದರೂ ಇದ್ದಾರೇನ್ರೀ' ಎಂದು ಗಟ್ಟಿಯಾಗಿ ಕೂಗಿದೆ. ಧ್ವನಿಯಿಂದ ಯಾರೆಂದು ತಕ್ಷಣ ಕಂಡು ಹಿಡಿದ ರಾಯರು, 'ಯಾರೂ ಇಲ್ಲಪ್ಪ ಮುಂದಕ್ಕೆ ಹೋಗು' ಎಂದು ಹೇಳಿ ಎಲ್ಲರನ್ನೂ ನಗಿಸಿದ್ದರು.

ಒಮ್ಮೆ ಯಾವುದೋ ಸಂದರ್ಭದಲ್ಲಿ ನಾವು ಪಂಕ್ತಿಯಲ್ಲಿ ಊಟಕ್ಕೆ ಕುಳಿತಿದ್ದೆವು. ಹಣೆಗೆ ಹಚ್ಚಿಕೊಳ್ಳಲು ಅಕ್ಷತೆಯ ಬಟ್ಟಲು ಬಂತು. ಅಕ್ಷತೆ ಹಚ್ಚಿಕೊಂಡ ರಾಯರು ಸರಿಯಾಗಿ ಹತ್ತಿದೆಯೇ ಎಂದು ಕೇಳಿದರು. ಹಾಸ್ಯಕ್ಕಾಗಿ ನಾನು, 'ಓಹೋ ಬೇಕಾದರೆ ನೋಡಿಕೊ' ಎಂದು ನನ್ನ ಅಂಗೈಯನ್ನು ಕನ್ನಡಿಯಂತೆ ಅವರ ಮುಖಕ್ಕೆ ಹಿಡಿದೆ. ಹಾಸ್ಯಪ್ರಿಯರಾದ ರಾಯರು ತಕ್ಷಣ ತಮ್ಮ ಕಣ್ಣು ಮುಚ್ಚಿಕೊಂಡು, 'ಸರಿಯಾಗಿ ಹತ್ತಿದೆ; ಸಾಕು' ಎಂದು ಹೇಳಿ ಪಂಕ್ತಿಯಲ್ಲಿದ್ದರವನ್ನೆಲ್ಲಾ ನಗಿಸಿದ್ದರು.

ಒಮ್ಮೆ ಹುಬ್ಬಳ್ಳಿಯಲ್ಲಿ ಸಲಗೊಳ್ಳಿ ಶಾಸ್ತ್ರಿ ಎಂಬೊಬ್ಬರು ಇವರ ಮನೆಯಲ್ಲಿ ತಂಗಿದ್ದರು. ನಾನು ರಜೆಯಲ್ಲಿ ಹೋಗುವಾಗ ರಾಯರ ಮನೆಗೆ ಬಂದೆ. ತಕ್ಷಣ ರಾಯರು, 'ನೋಡಿ ಶಾಸ್ತ್ರಿಗಳೇ, ಇವರು ಫಕ್ರುದ್ದೀನ್ ಹನ್ನಿ ಅಂತ. ಮಿಲಿಟರಿಯಲ್ಲಿದ್ದಾರೆ, ನಮ್ಮ ಸ್ನೇಹಿತರು' ಎಂದು ಪರಿಚಯಿಸಿದರು. ಹಾಸ್ಯವನ್ನರಿತ ನಾನು ಮುಸ್ಲಿಮರಂತೆಯೇ ಕನ್ನಡ ಮಾತಾಡಿದೆ. ಅವರ ಮನೆಯೊಳಗೆ ಬಿಡುಬೀಸಾಗಿ ಓಡಾಡುತ್ತಿದ್ದ ನನ್ನನ್ನು ನೋಡಿ ಶಾಸ್ತ್ರಿಗಳಿಗೆ ಮುಜುಗರ ವಾದರೂ ಏನೂ ಹೇಳಲಿಲ್ಲ. ಆದರೆ ಊಟಕ್ಕೆ ಕುಳಿತಾಗ ಅವರ ಮಗ್ಗುಲಲ್ಲಿಯೇ ನನಗೆ ಎಲೆ ಹಾಕಿದ್ದನ್ನು ಸಹಿಸಲಾರದೆ ಒಳಗೆ ಹೋಗಿ ರಾಯರ ತಾಯಿಯ ಹತ್ತಿರ ಪ್ರತಿಭಟಿಸಿದರು. ಆಗ ಅವರ ತಾಯಿ, 'ಯಾವ ಫಕ್ರುದ್ದೀನರೂ ಇಲ್ಲವಲ್ಲ? ನಿಮ್ಮ ಪಕ್ಕದಲ್ಲಿ ಕುಳಿತಿರುವವನು ನನ್ನ ಅಣ್ಣನ ಮಗ ವೆಂಕಟರಮಣ' ಎಂತ ಹೇಳಿದಾಗ ಶಾಸ್ತ್ರಿಗಳು ಪೆಚ್ಚಾದರು. ಊಟ ಮುಗಿಯುವವರೆಗೂ ಎಲ್ಲರೂ ಈ ವಿಷಯ ಚರ್ಚಿಸಿ ನಗುವಿನಲ್ಲಿಯೇ ಊಟ ಮುಗಿಸಿದೆವು. ಆದರೆ ಶಾಸ್ತ್ರಿಗಳು ತುಂಬ ನಕ್ಕಂತೆ ಕಾಣಿಸಲಿಲ್ಲ.

ರಾಯರ ಮನೆ ಒಂದು ರೀತಿಯಲ್ಲಿ ಧರ್ಮಛತ್ರವಾಗಿದ್ದರೆ ಇನ್ನೊಂದು ರೀತಿಯಲ್ಲಿ ಉಚಿತ ಆಸ್ಪತ್ರೆಯೂ ಆಗಿತ್ತು. ನಾನು ರಜೆಯಲ್ಲಿ ಬಂದಾಗ ಒಂದೆರಡು ದಿನ ಇದ್ದು ಹೋಗು ತ್ತಿದ್ದೆ. ಪ್ರತಿ ಸಾರಿ ಬಂದಾಗಲೂ ಹೊಸ ಹೊಸ ರೋಗಿಗಳು, ನೌಕರಿ ಅನ್ವೇಷಕರು, ಸಂಬಂಧಿ ಕರು, ಪರಿಚಯಸ್ಥರು, ನಿರುದ್ಯೋಗಿಗಳು ಇತ್ಯಾದಿ ಜನಗಳಿಂದ ರಾಯರ ಮನೆ ತುಂಬಿರುತ್ತಿತ್ತು. ಅವರಲ್ಲಿ ಕೆಲವರಾದರೂ ರಾಯರ ಉದಾರತ್ವವನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ

ಎಂದು ನನಗನ್ನಿಸುತ್ತಿತ್ತು. ರಾಯರು ಮಾತ್ರ ಯಾರಿಗೂ ಪಕ್ಷಪಾತ ಮಾಡುತ್ತಿರಲಿಲ್ಲ. ಅಷ್ಟೇ ಅಲ್ಲ ಆಸ್ಪತ್ರೆಗೆ ಔಷಧಿ, ಆಹಾರ ಇತ್ಯಾದಿ ಒಯ್ದುಕೊಡುತ್ತಿದ್ದರು. ಕೆಲವೊಮ್ಮೆ ರಾಯರೊಂದಿಗೆ ನಾನು, 'ಸೋಮಾರಿಗಳಿಗೆ, ಆಲಸಿಗಳಿಗೆ ಪ್ರೋತ್ಸಾಹ ಕೊಡುತ್ತಿದ್ದೀಯ' ಎಂತ ಎಷ್ಟು ವಾದಿಸಿದರೂ ಒಪ್ಪುತ್ತಿರಲಿಲ್ಲ. ಇದರ ಬಗ್ಗೆ ನಾನು ಚರ್ಚಿಸಿದಾಗ ರಾಯರು, 'ಮಿಲಿಟರಿಯವರಿಗೆ ಜೀವ ಅಳಿಸುವುದಷ್ಟೇ ಗೊತ್ತು. ಉಳಿಸುವುದು ಗೊತ್ತಿಲ್ಲ!' ಎಂದು ನನ್ನ ವಾದವನ್ನು ಮೊಟಕುಗೊಳಿಸಿ ತಮ್ಮ ಕಾರ್ಯವನ್ನು ಮುಂದು ವರೆಸುತ್ತಿದ್ದರು.

ಆದರೆ ರಾಯರು ಇಷ್ಟೊಂದು ಜನಕ್ಕೆ ಉಪಕಾರ ಮತ್ತು ಉಪಚಾರ ಮಾಡಲು ಅವರ ಧರ್ಮಪತ್ನಿ ಸತ್ಯವತಿಯವರ ಹಾರ್ದಿಕ ಸಹಕಾರ ಇಲ್ಲದಿದ್ದರೆ ಎಂದೂ ಸಾಧ್ಯವಾಗುತ್ತಿರಲಿಲ್ಲ. ಎಲ್ಲ ಕಷ್ಟನಷ್ಟ ಪರಿಶ್ರಮಗಳನ್ನೂ ಅಲಕ್ಷಿಸಿ ಅವರು ದುಡಿದು ದುಡಿದು ಸಹಕರಿಸಿದರು. ಎಲ್ಲ ಸಮಯದಲ್ಲಿಯೂ ಹಸನ್ಮುಖಿಯಾದ ಅವರು ತಾಳ್ಮೆಯೇ ಮೈದಾಳಿ ಬಂದಿರುವ ದೇವಿ ಎನ್ನಬಹುದು.

ರಾಯರು ಗಾಂಧೀವಾದವನ್ನು ವಾಸ್ತವ ಜೀವನಕ್ಕೆ ಇಳಿಸಿದ್ದರು. ಗಾಂಧಿಯವರಂತೆ ಯಾವುದನ್ನೂ ಪೋಲು ಮಾಡುತ್ತಿರಲಿಲ್ಲ. ಹೋಟೆಲಿಗೆ ಹೋದಾಗ ಚಟ್ನಿ, ಸಾಂಬಾರನ್ನು ಸಹ ಬಿಡುತ್ತಿರಲಿಲ್ಲ. ಊಟದ ಎಲೆಯನ್ನು ಚೊಕ್ಕ ಮಾಡಿಯೇ ಏಳುತ್ತಿದ್ದರು.

ರಾಯರು ಒಂದು ರೀತಿಯಲ್ಲಿ ಇಚ್ಛಾಮರಣಿಗಳು ಎನ್ನಬಹುದು. ಅಮೇರಿಕದಲ್ಲಿರುವ ತನ್ನ ಮಗಳು ಬರುವ ತನಕ ನಾನು ಸಾಯುವುದಿಲ್ಲ ಜೀವ ಹಿಡಿದುಕೊಂಡಿರುತ್ತೇನೆ ಎಂದು ಹೇಳಿ ರಾಯರು ೩-೪ ತಿಂಗಳು ಒದ್ದಾಡಿ ಮಗಳು, ಅಳಿಯ ಮತ್ತು ಮೊಮ್ಮಕ್ಕಳು ಬಂದ ಮೇಲೆಯೇ (ಜುಲೈ ೧೧, ೧೯೯೪ ಸೋಮವಾರ) ಸ್ವರ್ಗಸ್ಥರಾದರು.

ರಾಯರದು ಆಡಂಬರ, ಆಷಾಢಭೂತಿತನ ಇತ್ಯಾದಿಗಳಿಲ್ಲದ ಒಂದು ಸರಳ ಋಜು ಜೀವನ. ಕರ್ಮದಲ್ಲಿ ಹುಟ್ಟಿ, ಕರ್ಮದಲ್ಲಿಯೇ ಬೆಳೆದು, ಕರ್ಮದಲ್ಲಿಯೇ ಸ್ವರ್ಗಸ್ಥರಾದ ಅವರಿಗೆ, ಸ್ವರ್ಗವೆಂಬುದೊಂದು ಇದ್ದು ಅದು ಪ್ರಾಪ್ತವಾಗದಿದ್ದರೆ ಅದಕ್ಕಿಂತ ಹೆಚ್ಚಿನ ಅನ್ಯಾಯ ಈ ಜಗತ್ತಿನಲ್ಲಿ ಇರಲಾರದು.

**ಶ್ರೀಮತಿ ಶ್ಯಾಮಲಾ,*** ಹೈದರಾಬಾದ್

ಖಾದಿಪಂಚೆ, ಖಾದಿ ಷರಟು, ಕರೀಕೋಟು, ಟೋಪಿ ಧರಿಸಿದ ಸಣ್ಣ ಮೈಕಟ್ಟಿನ, ಅಷ್ಟೇನೂ ಎತ್ತರವಿಲ್ಲದ ವ್ಯಕ್ತಿ ನಮ್ಮಕ್ಕನನ್ನು ನೋಡಲು ಬಂದಾಗ, 'ತುಂಬ ಸಣ್ಣ, ನೋಡಲು ಚನ್ನಾಗಿಲ್ಲ' ಎಂದು ಹೇಳಿದ್ದೆ. ಅವರೇ ಶ್ರೀ ಮ. ಗೋವಿಂದರಾಯರು. ಅವರೊಡನೆ ನಮ್ಮಕ್ಕನ ಮದುವೆಯಾದ ನಂತರವೇ ನನಗೆ ಅವರ ಪೂರ್ಣ ಪರಿಚಯವಾದದ್ದು. ಈ ಐವತ್ತು ವರ್ಷಗಳು ಅವರ ಸಮೀಪವರ್ತಿಯಾಗಿದ್ದು ಅವರ ಸೌಜನ್ಯ, ಸಜ್ಜನಿಕೆ, ಸಹಾಯತತ್ಪರತೆ,

* ಈಕೆ ಈ ಮಧ್ಯದಲ್ಲಿ ತೀರಿಕೊಂಡದ್ದು ವಿಷಾದದ ಸಂಗತಿ.

ಶಿಸ್ತು ಮತ್ತು ಸಂಯಮದ ಪರಿಚಯವಾದದ್ದು. ಅವರು ಅಂದಿನಿಂದ ಕೊನೆಯವರೆಗೂ ನಮಗೆ ಹಿರಿಯಣ್ಣನಾಗಿ, ಮಾರ್ಗದರ್ಶಕರಾಗಿ, ಕಷ್ಟ ಸುಖಗಳಲ್ಲಿ ಭಾಗಿಯಾಗಿ ನಮಗೆ ಆಧಾರ ಸ್ತಂಭದಂತೆ ಇದ್ದರು.

ನನ್ನ ಮದುವೆಯ ಸಮಯದಲ್ಲಿ ಅವರು ತೆಗೆದುಕೊಂಡ ನಿಲುವು, ಮಾಡಿದ ಸಹಾಯ, ನನ್ನಲ್ಲಿ ತುಂಬಿದ ಧೈರ್ಯ ಇವುಗಳನ್ನು ನಾನೆಂದೂ ಮರೆಯಲಾರೆ. ಹೀಗೇ ಎಷ್ಟೋ ಮದುವೆಗಳನ್ನು ಮಾಡಿದ್ದಾರೆ, ಧನಸಹಾಯ ಮಾಡಿದ್ದಾರೆ. ಕಷ್ಟ ಎಂದು ಸಹಾಯ ಕೇಳಬಂದವರು ಯಾರೂ ಹಾಗೇ ವಾಪಸ್ಸು ಹೋದುದು ನನಗೆ ಗೊತ್ತಿಲ್ಲ. ನೊಂದವರಿಗೆ ಸಹಾಯ ಮಾಡುವುದು ಒಂದು ವ್ರತ ಎಂಬಂತಿದ್ದರು. ಅವರ ಹುಬ್ಬಳ್ಳಿಯ ಮನೆ ಒಂದು 'ಅತಿಥಿಗೃಹ'. ಸದಾ ಬಂಧುಗಳಿಂದಲೋ, ಸ್ನೇಹಿತರಿಂದಲೋ ತುಂಬಿರುತ್ತಿತ್ತು. ಮನೆಗೆ ಬಂದವರನ್ನು ಆದರಿಸಿ, ಸತ್ಕರಿಸುವುದೆಂದರೆ ಮಹಾ ಖುಷಿ. ಸ್ನೇಹಿತರ ಮನೆಯಲ್ಲೋ, ಬಂಧುಗಳ ಮನೆಯಲ್ಲೋ ಸಾವು, ನೋವಾದರೆ ಅಲ್ಲಿ ಮೊದಲು ಹಾಜರಿರುತ್ತಿದ್ದರು. ಕೈಲಾದ ಸಹಾಯ ಮಾಡಿ, ಸಾಂತ್ವನ ನೀಡಿ ಬರುತ್ತಿದ್ದರು. ಆದರೆ ಬಲಗೈ ಮಾಡಿದ್ದು ಎಡಗೈಗೆ ಗೊತ್ತಿರುತ್ತಿರಲಿಲ್ಲ!

ಒಮ್ಮೆ ವೈದ್ಯರು ಹೇಳಿದ್ದರು 'ಅವರದು ವಜ್ರಕಾಯ' ಅಂತ. ದೇಹವಷ್ಟೇ ಅಲ್ಲ ಮಾತು, ಕೃತಿ ಎಲ್ಲ ವಜ್ರದಷ್ಟೇ ಗಟ್ಟಿ. ಎಂತಹ ಸಮಯದಲ್ಲೂ ತಮ್ಮ ಸಂಯಮ ಕಳೆದುಕೊಳ್ಳುತ್ತಿರಲಿಲ್ಲ. ಅವರು ಎಂದೂ ದೇವರ ಪೂಜೆ ಮಾಡಿದವರಲ್ಲ. ದೇವರ ಹೆಸರು ಗುಣಗುಣಿಸುತ್ತಿರಲಿಲ್ಲ. ದೇವಸ್ಥಾನ, ತೀರ್ಥಕ್ಷೇತ್ರಗಳಿಗೆ ಹೋದವರಲ್ಲ. ಆದರೆ ಖಂಡಿತ ನಾಸ್ತಿಕನಲ್ಲ. ಮನೆಯಲ್ಲಿ ನಡೆಯುವ ಪೂಜೆ, ಹಬ್ಬ ಹರಿದಿನಗಳಿಗೆ ಎಂದೂ ಅಡ್ಡಿಮಾಡುತ್ತಿರಲಿಲ್ಲ. ಜಪಸರ ಹಿಡಿದು ಜಪ ಮಾಡುತ್ತಿದ್ದವರನ್ನು ತೋರಿಸಿ ನನಗೆ ಹೇಳುತ್ತಿದ್ದರು, "ಅವರೇನು ಜಪ ಮಾಡುತ್ತಾರೆ ಗೊತ್ತಾ? 'ಒಳಗೆ ದಾರ ಹೊರಗೆ ಮಣಿ ಕಂಡೋರ ಗಂಟಿಗೆ ನಾನೇ ಧಣಿ' ಅಂತ" ಎನ್ನುತ್ತಿದ್ದರು. ದೇವರಿಗೆ, ದೇವಸ್ಥಾನಕ್ಕೆ ವಂತಿಕೆಗೆ ಎಂದು ಬಂದವರೊಡನೆ ವಾದಕ್ಕೇ ಇಳಿಯುತ್ತಿದ್ದರು. 'ಶ್ರದ್ಧೆ ಬೇಕು, ಆಡಂಬರ ಬೇಡ' ಎಂದು ಹೇಳುತ್ತಿದ್ದರು. ಇಂಥ ನಮ್ಮ ಭಾವ ಸಾಯುವ ಮೊದಲು ಕೆಲತಿಂಗಳುಗಳಿಂದ ಜೋರಾಗಿ 'ಭವಾನಿಶಂಕರ' 'ಭವಾನಿಶಂಕರ' ಎಂದು ತಮ್ಮ ಮನೆದೇವರ ಸ್ಮರಣೆ ಮಾಡುತ್ತಿದ್ದರು. ನಮಗೆಲ್ಲ ಆಶ್ಚರ್ಯವೋ ಆಶ್ಚರ್ಯ.

ನಮ್ಮ ಭಾವನಿಗೆ ಕ್ರಿಕೆಟ್ ಎಂದರೆ ಬಹಳ ಹುಚ್ಚು. ಅದರಲ್ಲೂ ಜಿ.ಆರ್. ವಿಶ್ವನಾಥನ ಆಟ ಅಚ್ಚುಮೆಚ್ಚು. ಎಷ್ಟೇ ರಾತ್ರಿಯಾಗಿರಲಿ, ಬೆಳಗಿನ ಜಾವವೇ ಆಗಿರಲಿ ಆಟ ನೋಡಲು ಟಿ.ವಿ. ಮುಂದೆ ಬಂದು ಕೂಡುತ್ತಿದ್ದರು. ಇತ್ತೀಚೆಗೆ ಕಣ್ಣು ಮಂಜಾಗಿ, ಕಿವಿ ಕೇಳದಿದ್ದರೂ ಕ್ರಿಕೆಟ್ ನೋಡುವ ಹುಚ್ಚು ಹೋಗಿರಲಿಲ್ಲ. ಮಕ್ಕಳು ಮೊಮ್ಮಕ್ಕಳಿಂದ ವಿವರ ಕೇಳಿ ಆನಂದಿಸುತ್ತಿದ್ದರು.

ತನಗೆ ಹಿಡಿಸದ ವಿಷಯವನ್ನು ಖಂಡಿಸಿ ನಿಷ್ಠುರವಾಗಿ ಮಾತನಾಡುತ್ತಿದ್ದರು. ಒಮ್ಮೆ ಒಬ್ಬರು, ತನ್ನ ಮಗ ಹೊರ ದೇಶಕ್ಕೆ ಹೋದ ವಿಷಯ ಮಾತನಾಡುತ್ತಾ ಸಮುದ್ರಯಾನ ಮಾಡಿದವರಿಗೆ ನಮ್ಮ ಶಾಸ್ತ್ರದಲ್ಲಿ ಬಹಿಷ್ಕಾರವಿದೆ. ಆದರೆ ಮುಂಡನ ಮಾಡಿಕೊಂಡು, ಪ್ರಾಯಶ್ಚಿತ್ತ ಮಾಡಿಕೊಂಡರೆ ಜಾತಿಯೊಳಗೆ ಸೇರಿಸಿಕೊಳ್ಳಬಹುದು ಎಂದದ್ದಕ್ಕೆ, 'ಏನು ಸ್ವಾಮಿ ನಿಮ್ಮ

ಧರ್ಮಶಾಸ್ತ್ರದ ಪ್ರಕಾರ ನಡುಮನೆಯಲ್ಲಿ ಗೋಮಾಂಸ ತಿಂದು, ಹಿತ್ತಲಿಗೆ ಹೋಗಿ ಗೋಮೂತ್ರ, ಸಗಣಿ ತಿಂದು ಬಂದರೆ ಮಾಡಿದ ಪಾಪ ಪರಿಹಾರವಾದ ಹಾಗಾಯ್ತು ಅಲ್ಲವೇ?' ಎಂದು ಕೇಳಿದ್ದರು. ಅಷ್ಟು ನಿಷ್ಠುರವಾದಿ. ತನಗೆ ಸರಿ ಎಂದು ತೋರಿದುದನ್ನು ಸಾಧಿಸುವಂತಹ ಛಲವಾದಿ. ಸುಲಭವಾಗಿ ಯಾರಿಗೂ ಸೋಲುತ್ತಿರಲಿಲ್ಲ.

ತನಗೆ ಬೇಡವಾದದ್ದು, ಸರಿ ಎನಿಸದ್ದು ಮಾಡಿದರೆ ತುಂಬಾ ಸಿಟ್ಟು ಬರುತ್ತಿತ್ತು. ಮನಸ್ಸಿಗೆ ಚುಚ್ಚುವಂತೆ ಮಾತನಾಡಿ, ಸುಮ್ಮನಾಗಿ ಬಿಡುತ್ತಿದ್ದರು. ನಂತರ ಎಷ್ಟೋ ಸಮಯದವರೆಗೆ ಮಾತೇ ಆಡುತ್ತಿರಲಿಲ್ಲ. ಆದರೆ ಕೂಗಾಡಿ, ಹಾರಾಡಿ, ರಂಪರಗಳೆ ಮಾಡುತ್ತಿರಲಿಲ್ಲ. ಮಕ್ಕಳನ್ನು ಎಂದೂ ಶಿಕ್ಷಿಸಿದವರಲ್ಲ. ಯಾರಿಗೇ ಆಗಲಿ ಕೆಟ್ಟ ಮಾತು ಆಡಿದವರಲ್ಲ. ಕೆಟ್ಟ ಬೈಗುಳ ಬೈದವರಲ್ಲ. ಹೆಚ್ಚು ಮಾತು ಹರಟೆ ಬೇಕಾಗಿರಲಿಲ್ಲ. ನನಗೋ ಅತೀ ಮಾತು. ನಾನು ಮಾತನಾಡುತ್ತಾ ಅಡಿಗೆ ಮನೆಯಲ್ಲಿದ್ದರೆ, 'ಈ ದಿನ ಏನು ಅಡಿಗೆ ಉಂಟೋ? ಇಲ್ಲ ಮಾತಿ ನದೇ ಊಟವೋ?' ಎಂದು ನಯವಾಗಿ ಎಚ್ಚರಿಸುತ್ತಿದ್ದರು. 'ಮಾತಾಡಿದರೆ ಏನಂತೆ? ಕೆಲಸ ವನ್ನೂ ಮಾಡಲ್ವ?' ಎಂದು ನನಗೆ ನಾನೇ ಗೊಣಗಿಕೊಳ್ಳುತ್ತಿದ್ದೆ. ಅವರೆದುರಿಗೆ ಹೇಳಲು ಭಯ. ಆಗಾಗ್ಗೆ ಬಾಯಾಡಿಸುತ್ತಾ ಸದಾ ಮೆಲುಕು ಹಾಕುತ್ತಿದ್ದ ನನ್ನ ಸ್ವಭಾವವು ಅವರಿಗೆ ಹಿಡಿಸುತ್ತಿರಲಿಲ್ಲ. ನೆಗಡಿ, ಜ್ವರ ಇನ್ನೇನಾದರೂ ಅದಲ್ಲಿ ಉದಾಸೀನದಿಂದಿರುವ, ಹೊತ್ತಿಲ್ಲದ ಹೊತ್ತಿನಲ್ಲಿ ಊಟ ಮಾಡುವ ನನಗೆ ಸಿಟ್ಟು ಮಾಡುತ್ತಿದ್ದರು. ಅಷ್ಟೇ ತಮಾಷೆ ಮಾಡುತ್ತಿದ್ದರು.

ಅತೀ ಶಿಸ್ತಿನ ಮನುಷ್ಯ. ತಾನು ತೆಗೆದುಕೊಳ್ಳುವ ಆಹಾರದಿಂದ ಹಿಡಿದು ಔಷಧದ ವರೆಗೆ ವೇಳೆ, ಪ್ರಮಾಣ ಇವುಗಳನ್ನು ಕ್ರಮವಾಗಿ ಅನುಸರಿಸುತ್ತಿದ್ದರು. ವೇಳೆ ಹಾಗೂ ಹಣವನ್ನು ದುರುಪಯೋಗ ಮಾಡುತ್ತಿರಲಿಲ್ಲ. ಎಷ್ಟೋ ಸಲ ಬಸ್ಸಿಗಾಗಿ ಒಂದೇಕಡೆ ಕಾದು ನಿಲ್ಲುವ ಬದಲು ನಡೆದೇ ಅದಷ್ಟು ದೂರ ಕ್ರಮಿಸುತ್ತಿದ್ದರು. ತಿನ್ನುವ ಆಹಾರವನ್ನು ಚೆಲ್ಲಬಾರದು. ಕೆಡಿಸಬಾರದು. ಅವರು ಖಾಲಿ ಕಾಗದದ ತುಂಡನ್ನೂ ಜೋಪಾನ ವಾಗಿಡುತ್ತಿದ್ದರು.

ಕುಟುಂಬದ ಎಲ್ಲರೊಡನೆ ಕಲೆತು ಮಾತಾಡಿಕೊಂಡಿರುತ್ತಿದ್ದರು. ಹೆಣ್ಣುಮಕ್ಕಳು ಅಳಿಯಂದಿರು, ನನ್ನ ಮಕ್ಕಳು, ಅಳಿಯಂದಿರು ಎಲ್ಲರನ್ನೂ ಒಂದೇ ಸಮ ಪ್ರೀತಿಯಿಂದ ಕಾಣುತ್ತಿದ್ದರು. ಸೋದರಳಿಯ, ಸೋದರ ಸೊಸೆಯರೊಂದಿಗೆ ತಮಾಷೆಯಾಗಿ ಮಾತನಾಡಿ ಕೊಂಡಿರುತ್ತಿದ್ದರು. ಮನೆಗೆ ಜನ ಬರುತ್ತಿರಬೇಕು. ಯಾವ ಹೊತ್ತಿಗೇ ಬರಲಿ ಅವರಿಗೆ ಊಟ, ತಿಂಡಿ, ಕೊನೆಗೆ ಕಾಫಿಯಾದರೂ ಕೊಟ್ಟು ಸತ್ಕರಿಸಬೇಕು. ಎಲ್ಲರ ಯೋಗಕ್ಷೇಮ ವನ್ನೂ ಕೇಳಿ ತಿಳಿದುಕೊಳ್ಳಬೇಕು. ಅಷ್ಟು ವಾತ್ಸಲ್ಯಮಯಿ ನಮ್ಮ ಭಾವ.

ಬೇರೆಯವರ ಜೀವನದೊಂದಿಗೆ ತನ್ನ ಜೀವನ ಹೋಲಿಸಿಕೊಂಡು ಹೆಮ್ಮೆಪಟ್ಟವರೂ ಅಲ್ಲ; ಕೊರಗಿದವರೂ ಅಲ್ಲ. ಪ್ರಾಮಾಣಿಕನಾಗಿ, ಇತರರಿಗೆ ಸಹಾಯ ಮಾಡುತ್ತಾ ಆರಕ್ಕೆ ಏರದೆ ಮೂರಕ್ಕೆ ಇಳಿಯದ ತೃಪ್ತಿಯ ಜೀವನ ಅವರದು. ಎಲೆ ಮರೆಯ ಕಾಯಾಗಿ ಯಾರ ಹೊಗಳಿಕೆ, ಸತ್ಕಾರ ಸನ್ಮಾನಗಳನ್ನೂ ಆಶಿಸದೆ, ತನಗಾಗಿ ಯಾರಿಂದಲೂ ಏನನ್ನೂ ಅಪೇಕ್ಷಿಸದೆ ತನ್ನ ಪ್ರಕಾಶನದ 'ವಜ್ರ ಮಹೋತ್ಸವ'ವನ್ನೂ ತನ್ನ ದಾಂಪತ್ಯದ 'ಸುವರ್ಣ ಮಹೋತ್ಸವ'ವನ್ನೂ ಕಂಡ ಪುಣ್ಯಜೀವಿ ನಮ್ಮ ಭಾವ.

**ಶ್ರೀ ಕೆ.ವಿ. ಶ್ರೀನಿವಾಸ,** ಬೆಂಗಳೂರು

೧೯೪೩ನೆಯ ಇಸವಿ. ಆಗ ನನಗೆ ಹತ್ತು ವರ್ಷ. ನನ್ನ ಹಿರಿಯ ಅಕ್ಕ ಸತ್ಯವತಿಯನ್ನು ನೋಡಲು ಹುಡುಗ ಬರುತ್ತಾನೆಂದು ಮನೆಯವರಿಗೆಲ್ಲಾ ಸಂಭ್ರಮ. ನಮ್ಮ ಹತ್ತಿರದ ಸಂಬಂಧಿಗಳಾದ ಪುಟ್ಟಣ್ಣಯ್ಯನವರ ಜೊತೆ ಗೋವಿಂದರಾಯರು ಬಂದರು. ನಮ್ಮ ಮನೆಯಲ್ಲಿ ಎಲ್ಲರಿಗೂ ವರ ಒಪ್ಪಿಗೆಯಾಯಿತು. ಮ. ಗೋವಿಂದರಾಯರು ನಮ್ಮ ಮನೆಯ ಮೊದಲ ಅಳಿಯಂದಿರಾದರು.

ನನ್ನ ವಿದ್ಯಾಭ್ಯಾಸವು ಅವರ ಪ್ರೋತ್ಸಾಹದಿಂದ ಮುಂದುವರಿಯಿತು. ಪದವೀಧರನೂ ಆದೆ. ನನ್ನ ಪರೀಕ್ಷೆಯ ಫಲಿತಾಂಶ ಬಂದ ಮೇಲೆ ಅವರು ಬೆಂಗಳೂರಿಗೆ ಬಂದಿದ್ದರು. ಆಗ ಅವರು ನಗುಮುಖದಿಂದ ಹೇಳಿದ್ದರು: 'ಏನಪ್ಪಾ ನಾನು ಪುಸ್ತಕದ ಪಾರ್ಸಲ್‌ಗೂ ಅಷ್ಟು ಆತುರನಾಗಿ ರೈಲ್ವೆ ನಿಲ್ದಾಣದಲ್ಲಿ ಕಾಯುತ್ತಿರಲಿಲ್ಲ. ಆದರೆ ನೀನು ಕಳುಹಿಸುವ ಸಿಹಿ ತಿಂಡಿಗಳ ಪಾರ್ಸಲ್‌ಗೆ ಹುಬ್ಬಳ್ಳಿಗೆ ಬರುವ ಎಲ್ಲಾ ಗೂಡ್ಸ್‌ಗಳಿಗೂ ಕಾದಿರುತ್ತಿದ್ದೆ. ಆದರೆ ನಿರಾಶೆಯಾಯಿತು!' ಕೆಲವು ಸಲ ಅವರ ಮಾತುಗಳು ಕಟು ಎನಿಸಿದರೂ ಅದರಲ್ಲಿ ಆತ್ಮೀಯವಾದ, ಒಳಿತಾದ ಮಾರ್ಗದರ್ಶನದ ಹಿತನುಡಿ ಇರುತ್ತಿದ್ದವು.

ಗೋವಿಂದರಾಯರು ನಮ್ಮ ಕುಟುಂಬದ ಹಿತೈಷಿಗಳಾಗಿ, ಪ್ರತಿಯೊಂದು ವಿಷಯ ದಲ್ಲಿಯೂ ನಮಗೆ ದಾರಿದೀಪವಾಗಿ, ನಮ್ಮ ಶ್ರೇಯಸ್ಸು ಹಾಗೂ ಏಳಿಗೆಗಾಗಿಯೂ ಶ್ರಮಪಟ್ಟರು.

**ಶ್ರೀ ಕೆ.ಆರ್. ನಾಗರಾಜ,** ದಾವಣಗೆರೆ

ಸಾಹಿತ್ಯ ಭಂಡಾರದ ಗೋವಿಂದರಾಯರು ನನ್ನ ಮಟ್ಟಿಗೆ ಗೋವಿಂದಭಾವ. ಅವರು ನನ್ನ ತಂದೆಯ ಅಕ್ಕನ ಮಗ. ಹೀಗಾಗಿ, ತುಂಬ ಹತ್ತಿರದ ಸಂಬಂಧವಾದ್ದರಿಂದ ವಯಸ್ಸಿ ನಲ್ಲಿ ನನಗಿಂತ ತುಂಬಾ ಹಿರಿಯರಾದರೂ ಅವರ ವಿಶ್ವಾಸಪೂರ್ಣ ಸ್ನೇಹ ಸಲಿಗೆಗೂ ಎಡೆಕೊಟ್ಟಿತ್ತು. ನಾನು ಅವರನ್ನು ಏಕವಚನದಲ್ಲೇ ಸಂಬೋಧಿಸುತ್ತಿದ್ದೆ.

ಅವರನ್ನು ನಾನು ಮೊದಲು ನೋಡಿದ್ದು ಅವರ ಮದುವೆ ಸಂದರ್ಭದಲ್ಲಿ. ಆಗ ನನಗೆ ಆರು ವರ್ಷ. ಆಗಿನ ನೆನಪು ತುಂಬಾ ಮಸುಕಾಗಿದೆ. ಮುಂದಿನ ಕೆಲವು ವರ್ಷ ಗಳಲ್ಲಿಯೇ ನಮ್ಮ ತಂದೆ ಮತ್ತು ಎಲ್ಲವನ್ನೂ ಕಳೆದುಕೊಂಡು ನಾವು ಬಹಳ ಕಷ್ಟಕ್ಕೆ ಸಿಲುಕಿದೆವು. ಆಗ ಅವರು ನೀಡಿದ ನೆರವು, ತೋರಿದ ಸಹಾನುಭೂತಿ, ಹೇಳಿದ ಧೈರ್ಯ, ಮಾಡಿದ ಮಾರ್ಗದರ್ಶನ ಈ ಎಲ್ಲವುಗಳನ್ನು ನಾನು ಎಂದಿಗೂ ಮರೆಯುವಂತಿಲ್ಲ.

ಗೋವಿಂದರಾಯರ ಕನ್ನಡಪ್ರೇಮ ಪ್ರಶ್ನಾತೀತವೂ ಏಕಪ್ರಕಾರದ್ದೂ ಆಗಿತ್ತು. ಅವರು ಕೇವಲ ಕನ್ನಡ ಪುಸ್ತಕಗಳನ್ನು ಮಾತ್ರ ಮಾರಾಟ ಮಾಡುತ್ತಿದ್ದರು. ಕನ್ನಡದ (ಸೇವೆಯನ್ನು) ಕಾರ್ಯವನ್ನು ಅವರು ತಮ್ಮದೇ ವ್ಯಾಪ್ತಿಯಲ್ಲಿ ಪ್ರಾಮಾಣಿಕವಾಗಿ ಮಾಡಿದರಲ್ಲದೇ ಯಾವುದೇ ಭಾಷಣ ಚಳುವಳಿ ಪ್ರಚಾರಗಳಲ್ಲಿ ಭಾಗವಹಿಸಿದ್ದು ನನಗೆ ತಿಳಿದಿಲ್ಲ.

ಮುದ್ರಣ ಕಾಗದದ ಕೊರತೆಯ ದಿನಗಳಲ್ಲಿ ತಮಗೆ ನ್ಯಾಯವಾಗಿ ದೊರೆತಷ್ಟೇ ಕಾಗದದಿಂದ ಸಾಧ್ಯವಾದಷ್ಟು ಪುಸ್ತಕಗಳನ್ನು ಮಾತ್ರ ಪ್ರಕಟಿಸಿದರು. ಕಾಳಸಂತೆಯಲ್ಲಿ ಕಾಗದವನ್ನು ಕೊಳ್ಳುವ ಯತ್ನವನ್ನು ಅವರು ಎಂದೂ ಮಾಡಲಿಲ್ಲ. ಕೊಡುವ ತೆಗೆದುಕೊಳ್ಳುವ ವ್ಯವಹಾರದಲ್ಲಿ ಅವರು ತುಂಬಾ ಚೊಕ್ಕವಾಗಿದ್ದರು. ಬಹುಶಃ 'ವ್ಯವಹಾರದಲ್ಲಿ ಪ್ರಾಮಾಣಿಕತೆ' ಎನ್ನುವುದು ಇಂದಿನ ಪೀಳಿಗೆಯವರಿಗೆ ವಿರೋಧಾಭಾಸದ ಹಾಸ್ಯಾಸ್ಪದ ಪದಪುಂಜ. ಆದರೆ ಗೋವಿಂದ ರಾಯರಲ್ಲಿ ಅದು ಅನೇಕರು ಕಂಡ ಸತ್ಯ. ಆರ್ಥಿಕವಾಗಿ ಸ್ವಾವಲಂಬಿಗಳಾಗಿದ್ದರು. ಹಣ ಶೇಖರಿಸಿ ಶ್ರೀಮಂತರಾಗಿ ವೈಭವದಿಂದ ಬಾಳಬೇಕೆಂಬ ವಿಚಾರ ಅವರಿಗೆ ಬರಲೇ ಇಲ್ಲ. ಅವರ ಶಾಲಾ ದಿನಗಳಲ್ಲಿ ಗಾಂಧೀಜಿಯವರ ಪ್ರಭಾವದಿಂದ ಸ್ವಾತಂತ್ರ್ಯ ಹೋರಾಟ, ಖಾದಿ ಗ್ರಾಮೋದ್ಯೋಗ ಮುಂತಾದವುಗಳಲ್ಲಿ ಭಾಗವಹಿಸಿದ ಹಿನ್ನೆಲೆಯಲ್ಲಿ ಇಂತಹ ಮನೋಭಾವ ಅವರಿಗೆ ಸಾಧ್ಯವಾಗಿರಬಹುದು. ಆದರೆ ಕೊನೆಯವರೆಗೂ ಆ ಮನೋಭಾವವನ್ನೇ ಉಳಿಸಿ ಕೊಂಡು ಬಂದುದರಲ್ಲಿ ಅವರ ಹೆಚ್ಚುಗಾರಿಕೆಯಿದೆ.

ಅವರ ದುಡಿಮೆಗೆ, ಸೇವೆಗೆ, ಸಾಮಾಜಿಕ ಕಳಕಳಿಗೆ, ಪ್ರಾಮಾಣಿಕತೆಗೆ, ಅವರ ಜೀವಿತ ಕಾಲದಲ್ಲಿ ಒಂದು ಮನ್ನಣೆ, ಗೌರವ, ಸನ್ಮಾನಗಳು ಅವರು ಬಯಸದಿದ್ದರೂ, ಲಭಿಸಿದ್ದರೆ ನಮ್ಮಂಥವರಿಗೆ ತುಂಬ ಸಂತೋಷವಾಗುತ್ತಿತ್ತು.

**ಶ್ರೀ ರಾ.ಹಿ. ನಾಗಭೂಷಣ,** ಬೆಂಗಳೂರು

ನಾನು ದಿವಂಗತ ಶ್ರೀ ಗೋವಿಂದರಾಯರನ್ನು ಮೊದಲು ನೋಡಿದ್ದು ೧೯೬೬ರಲ್ಲಿ. ಆಗ ನಾನು ಸಂಶೋಧನಾ ವಿದ್ಯಾರ್ಥಿಯಾಗಿದ್ದೆ. ಶ್ರೀ ಗೋವಿಂದರಾಯರ ಮಗಳು ಕುಮಾರಿ ಗೀತಾ (ಮುಂದೆ ನನ್ನ ಬಾಳ ಸಂಗಾತಿಯಾದವಳು) ನನ್ನ ಸಹೋದ್ಯೋಗಿಯಾಗಿದ್ದಳು. ಅವಳು ತನ್ನ ಎಂ.ಎಸ್‌ಸಿ., ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್ ಗಳಿಸಿದ್ದಕ್ಕಾಗಿ ತನ್ನ ಸೋದರಮಾವನ ಮನೆಯಲ್ಲಿ ನಮಗೆ ಔತಣಕೂಟವೊಂದನ್ನು ಏರ್ಪಡಿಸಿದ್ದ ಸಂದರ್ಭದಲ್ಲಿ ನಾನು ಅವರನ್ನು ಭೇಟಿಯಾದೆ. ಅತ್ಯಂತ ಸರಳವಾಗಿದ್ದ ಅವರೊಂದಿಗೆ ಕೆಲಕಾಲ ಸಂಭಾಷಿಸುತ್ತಿದ್ದಂತೆ ಅವರ ವ್ಯಕ್ತಿತ್ವದ ನಿಜವಾದ ಅರಿವಾಯಿತು. ಅವರು ಬಲು ಬೇಗನೆ ನನಗೆ ಆದರಣೀಯರಾದರು.

ಅವರು ಗೊಡ್ಡು ಸಂಪ್ರದಾಯಗಳ ಕಡು ವಿರೋಧಿಯಾಗಿದ್ದರು. ನಾಸ್ತಿಕರೆಂದಲ್ಲ, ಆದರೆ ದೇವರ ಹೆಸರಿನಲ್ಲಿ ಆಗುತ್ತಿರುವ ಅನ್ಯಾಯ, ಅಧರ್ಮಗಳ ಕಡು ವಿರೋಧಿಯಾಗಿದ್ದರು. ನಾನು ಪರದೇಶದಲ್ಲಿದ್ದಾಗ ನನ್ನ ಸಹೋದ್ಯೋಗಿ ಹಾಗೂ ಮಿತ್ರನಾಗಿದ್ದ ಅಮೆರಿಕೆಯ ಡ್ಯಾನ್ ಯಂಗ್ ಅವರು ಭಾರತ ಪ್ರವಾಸದಲ್ಲಿದ್ದು ನನ್ನನ್ನು ಭೇಟಿಮಾಡಲು ಬೆಂಗಳೂರಿಗೆ ಬಂದಿದ್ದಾಗ ಕಾರಣಾಂತರದಿಂದ ಶ್ರೀ ಗೋವಿಂದರಾಯರ ಮನೆಯಲ್ಲಿ ಒಂದು ದಿನದ ಮಟ್ಟಿಗೆ ತಂಗ ಬೇಕಾಯಿತು. ಅವರಿಗೆ ನಮ್ಮ ಪದ್ಧತಿಗಳು, ನಡೆನುಡಿಗಳು ಸರಿಹೋಗುತ್ತದೋ ಇಲ್ಲವೋ ಎಂಬ ಅನುಮಾನ ನನಗೆ. ಆದರೆ ಶ್ರೀ ಗೋವಿಂದರಾವ್ ದಂಪತಿಗಳ ಸರಳತೆ ಹಾಗೂ ಕೃತ್ರಿಮರಹಿತ ಜೀವನಕ್ರಮಗಳನ್ನು ಕಂಡು ಅವರು ಅತ್ಯಂತ ಪ್ರಭಾವಿತರಾಗಿ ಸುಮಾರು

ಎರಡು ತಿಂಗಳುಗಳ ಕಾಲ ಅವರ ಮನೆಯಲ್ಲಿ ಅವರಲ್ಲೊಬ್ಬನಾಗಿ ಇದ್ದುಬಿಟ್ಟರು. ಭಾರತೀಯ ಕುಟುಂಬವೊಂದರಲ್ಲಿ ಇರುವ ಪ್ರೇಮ, ವಾತ್ಸಲ್ಯ, ಅಂತಃಕರಣ ಇವನ್ನು ಪ್ರಥಮಬಾರಿಗೆ ಕಂಡ ಇವರು ಜೀವನದ ಹೊಸ ಅರ್ಥವನ್ನು ಕಂಡುಕೊಂಡರೆಂದರೆ ತಪ್ಪಾಗಲಾರದು. ನಂತರ ತಮ್ಮ ದೇಶಕ್ಕೆ ಮರಳಿದ ಕೆಲತಿಂಗಳಿನಲ್ಲಿ ತಾವು ಶ್ರೀ ಗೋವಿಂದರಾಯರ ಎರಡನೆಯ ಮಗಳು ಕುಮಾರಿ ಶುಭಾಳನ್ನು ಮೆಚ್ಚಿರುವುದಾಗಿಯೂ ಅವಳನ್ನು ವಿವಾಹವಾಗಲಿಚ್ಛಿಸಿರುವು ದಾಗಿಯೂ ತಿಳಿಸಿದಾಗ ರಾಯರು ಒಪ್ಪುವರೋ ಇಲ್ಲವೋ ಎಂದು ನಮಗೆ ಸಹಜವಾಗಿಯೇ ಆತಂಕವಾಗಿತ್ತು. ಆದರೆ ಶ್ರೀ ರಾಯರು ತಮ್ಮ ಮಗಳ ಇಷ್ಟವು ಅದೇ ಆದರೆ ತಮ್ಮ ಅಭ್ಯಂತರವೇನಿಲ್ಲವೆಂದು ತಿಳಿಸಿದಾಗ ನಮಗೆಲ್ಲಾ ಆಶ್ಚರ್ಯ. ಜಾತಿ, ಕುಲ, ಮತ, ದೇಶ, ವರ್ಣ ಇವಾವುದನ್ನೂ ಗಣಿಸದೆ ಕೇವಲ ಆತನ ಗುಣಕ್ಕೆ ಮಾತ್ರ ಬೆಲೆ ಕೊಟ್ಟು ಮಗಳನ್ನು ಆತನಿಗೆ ಕೊಟ್ಟು ಮದುವೆ ಮಾಡಿ ದೂರದ ನಾಡಿಗೆ ಕಳುಹಿಸಿಕೊಟ್ಟದ್ದು ಅವರ ವ್ಯಕ್ತಿತ್ವದ ಹಿರಿಮೆಯನ್ನು ತೋರಿಸುತ್ತದೆಯೆಂದರೆ ಅತಿಶಯೋಕ್ತಿಯಾಗಲಾರದು.

ಕನ್ನಡದ ಬಗೆಗೆ ಅತ್ಯಂತ ಕಳಕಳಿಯನ್ನು ಹೊಂದಿದ್ದ ಅವರು ಭಾಷಾಂಧರಾಗಿರಲಿಲ್ಲ. ಕನ್ನಡಿಗರ ಅಭಿಮಾನಶೂನ್ಯತೆ ಅವರಿಗೆ ನೋವುಂಟುಮಾಡುತ್ತಿತ್ತು. ಬೆಂಗಳೂರಿನ ಜನ ಮಾತನಾಡುವ ಇಂಗ್ಲಿಷ್ ಮಿಶ್ರಿತ ಕನ್ನಡದ ಬಗೆಗೆ ಅವರು ಅವಹೇಳನ ಮಾಡುತ್ತಿದ್ದರು. ಸಂಪದ್ಭರಿತವಾದ ತಮ್ಮ ಸ್ವಂತ ಭಾಷೆಯ ಸಾಹಿತ್ಯದ ಗಂಧವೇ ಇಲ್ಲದೆ ಇತರ ಭಾಷೆಯ ಸಾಹಿತ್ಯದಲ್ಲಿ ಪಂಡಿತರೆಂದು ತೋರಿಸಿಕೊಳ್ಳುವವರನ್ನು ಕಂಡು ಅವರು ಮರುಗುತ್ತಿದ್ದರು. ಉಪಹಾರ ಗೃಹಗಳಲ್ಲಿ ಅವರು ಕೇಳಿದಷ್ಟು ದುಡ್ಡು ಕೊಟ್ಟು ಮಸಾಲೆದೋಸೆಯನ್ನು ಗೊಣ ಗುಟ್ಟದೆ ತಿಂದು ತೃಪ್ತಿಯಿಂದ ಹೊರಬರುವ ಅದೇ ಕನ್ನಡಿಗರು ಪುಸ್ತಕಗಳ ಅದೂ ಕನ್ನಡ ಪುಸ್ತಕಗಳ ಬಗೆಗೆ ತುಂಬಾ ಚೌಕಾಶಿ ಮಾಡುವುದನ್ನು ನೋಡಿ ರೋಸುತ್ತಿದ್ದರು ಶ್ರೀ ರಾಯರು.

ತಮ್ಮ ಕೊನೆಗಾಲದಲ್ಲಿ ಅವರು ತಾವು ಮಕ್ಕಳಿಗೆ ಏನೂ ಮಾಡಲಿಲ್ಲ ಎಂಬ ಕೊರಗಿ ನಿಂದಿದ್ದರು. ಇಷ್ಟು ವರ್ಷಗಳ ಸತತ ದುಡಿಮೆಯ ನಂತರವೂ ತಮಗೆ ಒಂದು ಸ್ವಂತ ಸೂರನ್ನೂ ಕೂಡಾ ಮಾಡಿಕೊಳ್ಳಲಾಗಲಿಲ್ಲವೆಂದು ಹಲವೊಮ್ಮೆ ತಮ್ಮ ಅಳಲನ್ನು ತೋಡಿ ಕೊಂಡಿದ್ದುಂಟು. ಅವರು ಮಕ್ಕಳಿಗೆ ಯಾವ ಆಸ್ತಿಯನ್ನೂ ಮಾಡಿಡಲಿಲ್ಲ ನಿಜ. ಆದರೆ ಅವರು ಎಲ್ಲಕ್ಕಿಂತ ಮಿಗಿಲಾದ ಹಾಗೂ ಅರ್ಥಪೂರ್ಣವಾದ ಆಸ್ತಿಯನ್ನು ಬಿಟ್ಟು ಹೋಗಿದ್ದಾರೆ. ಅದೆಂದರೆ ಸತ್ಯ, ನ್ಯಾಯ, ಧರ್ಮ ಹಾಗೂ ಪ್ರಾಮಾಣಿಕತೆಯ ಹಾದಿ.

ಶ್ರೀ ಗೋವಿಂದರಾಯರ ಬಗೆಗೆ ಬರೆಯಲು ಗುಣವಾಚಕಗಳ ಅವಶ್ಯಕತೆಯಿಲ್ಲ. ಜೀವನದಲ್ಲಿ ಅವರು ಏನು ಸಾಧಿಸಿದರು, ಈ ಜಗತ್ತಿಗೆ ಅವರ ಕೊಡುಗೆ ಏನು ಎಂಬ ಪ್ರಶ್ನೆಗಳಿಗೆ ಉತ್ತರಿಸುವುದು ಅಷ್ಟು ಸುಲಭವಲ್ಲ. ಭೌತಿಕವಾಗಿ ಅವರ ಕೊಡುಗೆ ಹೇಳಿಕೊಳ್ಳು ವಂತಹದೇನೂ ಆಗಿರಲಿಲ್ಲ ನಿಜ. ಆದರೆ ಅತ್ಯಂತ ಕಡುಬಡತನದಲ್ಲಿ ಹುಟ್ಟಿದ ಶ್ರೀ ಗೋವಿಂದ ರಾಯರು ಅನೇಕ ಕಷ್ಟಕಾರ್ಪಣ್ಯಗಳ ನಡುವೆಯೂ ಧೃತಿಗೆಡದೆ ತಾವು ನಂಬಿದ್ದ ತತ್ವಗಳಿಗನು ಗುಣವಾಗಿ ಸತ್ಯ, ಧರ್ಮ ಹಾಗೂ ಪ್ರಾಮಾಣಿಕತೆಯ ಹಾದಿಯಲ್ಲಿ ತಮ್ಮ ೮೮ ವರ್ಷಗಳ ತುಂಬು ಜೀವನದುದ್ದಕ್ಕೂ ನಡೆದು, ಈ ಕಲುಷಿತ ಸಮಾಜದಲ್ಲಿ ಹೀಗೂ ಕೂಡ ಮರ್ಯಾದೆ

ಯಾಗಿ ಬದುಕಬಹುದು ಎಂದು ತೋರಿಸಿರುವುದೇ ಅವರ ಜೀವನದ ದೊಡ್ಡ ಸಾಧನೆ ಎಂದು ನನ್ನ ಅನಿಸಿಕೆ.

**ಶ್ರೀಮತಿ ಸುಧಾ ಪದ್ಮನಾಭ,** ಧಾರವಾಡ

ನಾನು ಗೋವಿಂದರಾಯರ ತಮ್ಮ ಶ್ರೀ ಅನಂತಮೂರ್ತಿಯವರ ಹಿರಿಯ ಮಗಳು. ನಮ್ಮದು ಹುಬ್ಬಳ್ಳಿಯಲ್ಲಿ ೧೯೬೯ರ ವರೆಗೆ ಅವಿಭಕ್ತ ಕುಟುಂಬವಾಗಿತ್ತು. ನಮ್ಮ ದೊಡ್ಡಪ್ಪನಿಗೆ ೬ ಜನ ಮಕ್ಕಳು. ನಾವು ೮ ಜನ ಮಕ್ಕಳು. ಒಟ್ಟು ೧೪ ಜನ ಮಕ್ಕಳೂ ಹುಬ್ಬಳ್ಳಿಯಲ್ಲಿ ಒಂದೇ ಮನೆಯಲ್ಲಿ ಬೆಳೆದು ಬಂದೆವು. ದೊಡ್ಡಪ್ಪ ಚಿಕ್ಕ ವಯಸ್ಸಿನಲ್ಲಿ ನಮಗೆ ಹಾಕಿಕೊಟ್ಟ ಶಿಸ್ತು, ಸ್ವಚ್ಛತೆ, ಅಚ್ಚುಕಟ್ಟುತನ, ಸಮಯಪಾಲನೆ, ತಾಳ್ಮೆ, ಪರೋಪಕಾರ ಇವು ಇಂದಿಗೂ ನಮಗೆ ದಾರಿದೀಪವಾಗಿವೆ ಮತ್ತು ಸುಗಮವಾದ ಜೀವನಕ್ಕೆ ದಾರಿಯಾಗಿದೆ. ನನ್ನ ತಂದೆ ಬೆಳಗ್ಗೆಯಿಂದ ರಾತ್ರಿಯವರೆಗೆ ಅಂಗಡಿ, ವ್ಯಾಪಾರ ಎಂದು ಹೊರಗಡೆಯೇ ಇರುತ್ತಿದ್ದರು. ಬೆಳಗ್ಗೆ ಅಂಗಡಿಗೆ ಹೋದರೆ ಅಲ್ಲಿಗೇ ಊಟ ತರಿಸಿಕೊಂಡು ಊಟ ಮಾಡುತ್ತಿದ್ದರು. ರಾತ್ರಿಯೇ ತಿರುಗಿ ಬರುತ್ತಿದ್ದುದು. ಹೀಗಾಗಿ ಮನೆಯಲ್ಲಿ ಮಕ್ಕಳ ಮೇಲೆ ಅವರಿಗೆ ನಿಗಾ ಕಡಿಮೆ. ನಮ್ಮ ದೊಡ್ಡಪ್ಪ ಪ್ರಕಾಶನಕ್ಕೆ ಹೆಚ್ಚು ಒತ್ತುಕೊಟ್ಟು, ಕರಡುಪ್ರತಿ ತಿದ್ದುವಿಕೆ ಎಂದು ಹೆಚ್ಚಾಗಿ ಮನೆಯಲ್ಲಿ ಇರುತ್ತಿದ್ದರು. ಮಕ್ಕಳ ಮೇಲೆ ಅವರದೇ ಗಮನ, ಎಚ್ಚರಿಕೆ ಹೆಚ್ಚು. ನಮ್ಮ ಪ್ರತಿಯೊಂದು ಕೆಲಸವನ್ನೂ ಮತ್ತು ನಡವಳಿಕೆಯನ್ನೂ ಕರಡುಪ್ರತಿ ತಿದ್ದುವಾಗಲೇ ಗಮನಿಸುತ್ತಿದ್ದರು. ಊಟಕ್ಕೆ ಕೂಡುವಾಗ ತಟ್ಟೆ, ಲೋಟ, ಚಾಪೆ, ಎಲ್ಲ ಅಚ್ಚುಕಟ್ಟಾಗಿ ಒಂದೇ ಸಾಲಿನಲ್ಲಿ ಹಾಕಿಸುತ್ತಿದ್ದರು. ನೋಡಿದವರಿಗೆ ಊಟದ ಪಂಕ್ತಿ ನೋಡಿಯೇ ಹೊಟ್ಟೆ ತುಂಬುವಂತಿರುತ್ತಿತ್ತು. ಎಲ್ಲ ಮಕ್ಕಳೂ (೩-೪ ಮಕ್ಕಳು ಚಿಕ್ಕವರಿದ್ದರು) ಸ್ವಚ್ಛವಾಗಿ ಕೈ-ಕಾಲು ತೊಳೆದುಕೊಂಡು ಬಂದು ಊಟಕ್ಕೆ ಕೂಡಬೇಕಿತ್ತು. ಕೈ ತೊಳೆದು ಬಂದು ಅವರ ಮುಂದೆ ಎರಡೂ ಕೈಗಳನ್ನೂ ಹಿಡಿದು ತೋರಿಸಿ ಊಟಕ್ಕೆ ಕೂಡುತ್ತಿದ್ದೆವು. ಸ್ವಲ್ಪ ಕೊಳೆ ಇದ್ದರೂ ಸಾಕು, ಮತ್ತೆ ಓಡಿಸುತ್ತಿದ್ದರು. ನಾನು ದೊಡ್ಡವಳಾದ್ದರಿಂದ ನನ್ನ ಸರದಿಯೇ ಮೊದಲು ಬರುತ್ತಿತ್ತು. ಹೀಗಾಗಿ ನಾನು ಬಲುಬೇಗ ಎಚ್ಚರಿಕೆಯಿಂದ ನಡೆದುಕೊಳ್ಳುವುದನ್ನು ಕಲಿತುಬಿಟ್ಟೆ.

ಊಟ-ತಿಂಡಿ ಎಲ್ಲ ಅಗಿದು ಅಗಿದು ತಿನ್ನಬೇಕು, ನಿಧಾನವಾಗಿ ಮಾಡಬೇಕು. ಇದೇ ಅಭ್ಯಾಸವಾಗಿ ಹೋಗಿದೆ. ಇದರಿಂದ ಅತ್ತೆಯ ಮನೆಯಲ್ಲಿ ನಾನು ಊಟದಲ್ಲಿ ನಿಧಾನಿ ಎನಿಸಿಕೊಂಡುಬಿಟ್ಟಿದ್ದೇನೆ. ಸ್ಕೂಲಿನಿಂದ ಬಂದ ತಕ್ಷಣ ಪುಸ್ತಕಗಳನ್ನು, ಸಮವಸ್ತ್ರ ಬಟ್ಟೆಗಳನ್ನು ಇಡುವ ಜಾಗದಲ್ಲಿಯೇ ಇಡಬೇಕಿತ್ತು. ಸ್ವಲ್ಪ ಹೆಚ್ಚು-ಕಡಿಮೆ ಆದರೂ ಗದರಿಕೊಳ್ಳುತ್ತಿದ್ದರು. ಒಟ್ಟಿನಲ್ಲಿ ನಮ್ಮ ಪ್ರತಿಯೊಂದು ಸಣ್ಣ-ಪುಟ್ಟ ಕೆಲಸದಲ್ಲಿಯೂ ಅಚ್ಚುಕಟ್ಟುತನವನ್ನು ನಿರೀಕ್ಷಿಸುತ್ತಿದ್ದರು. ಕೆಲವು ಸಾರಿ ಬೆನ್ನುಹತ್ತಿ ಮಾಡಿಸುವಾಗ ಕೋಪ ಬರುತ್ತಿತ್ತು. ಆದರೆ ತಿಳಿವಳಿಕೆ ಬಂದ ಮೇಲೆ ಅದಕ್ಕೆಲ್ಲ ಹೊಂದಿಕೊಂಡುಬಿಟ್ಟೆವು. ಈಗ ಗೃಹಜೀವನಕ್ಕೆ ಕಾಲಿಟ್ಟ ಮೇಲೆ, ಮನೆಯಲ್ಲಿಯೂ, ಹೊರಗಡೆ ಕಛೇರಿಯಲ್ಲಿಯೂ ಕೆಲಸ ಮಾಡಲು ತೊಡಗಿದ

ಮೇಲೆ ಅದರ ಬೆಲೆ ಹೆಚ್ಚೆಚ್ಚು ಗೊತ್ತಾಗಿದೆ.

ಅವರು ಚಿಕ್ಕವಯಸ್ಸಿನಲ್ಲಿ ನಮಗೆ ಹಾಕಿಕೊಟ್ಟ ಶಿಸ್ತು, ಅಚ್ಚುಕಟ್ಟುತನ ಎಲ್ಲವೂ ಅವರನ್ನು ಪ್ರತಿ ಹೆಜ್ಜೆಗೂ ನೆನೆಸುವಂತೆ ಆಗಿದೆ. ಹೊಲಿಗೆ, ಹೆಣಿಗೆ ಮುಂತಾದ ಕಲೆಗಳಿಗೂ ಕೂಡಾ ಪ್ರೋತ್ಸಾಹ ಕೊಟ್ಟಿದ್ದಾರೆ. ಒಂದು ಗುರಿ ಇಟ್ಟುಕೊಂಡು ಸಾಗಬೇಕು, ಇಟ್ಟ ಹೆಜ್ಜೆಯಿಂದ ಹಿಂದೆ ಬರಬಾರದು ಎಂಬುದು ಅವರ ಧ್ಯೇಯವಾಗಿತ್ತು. ಮಾಡಬೇಕು ಎಂದರೆ ಮಾಡಲೇ ಬೇಕು, ಮೀನಮೇಷ ಸಲ್ಲದು. ಅವೆಲ್ಲ ಅವರಿಂದ ನನಗೆ ಬಳುವಳಿಯಾಗಿ ಬಂದಿದೆ.

'ಬಸ್ಸಿನಲ್ಲಿ ಹಣ ಕೊಟ್ಟು ಟಿಕೆಟ್ ಪಡೆದು ಪ್ರಯಾಣ ಮಾಡಬೇಕು, ಟಿಕೆಟ್ ಕೊಡ ದಿದ್ದರೆ ಕೇಳಿ ಪಡೆಯಬೇಕು' ಎಂದು ಹೇಳಿಕೊಡುತ್ತಿದ್ದರು. ನನ್ನ ೧೧ನೇ ವಯಸ್ಸಿನಿಂದ ಬಸ್ಸಿನ ಪ್ರಯಾಣ ಶುರುವಾಗಿದೆ. ಆಗ ಕಾಲ ಚೆನ್ನಾಗಿತ್ತು. ಕೇಳಿದರೆ ನಿರ್ವಾಹಕರು ಸುಮ್ಮನೆ ಟಿಕೆಟ್ ಕೊಟ್ಟುಬಿಡುತ್ತಿದ್ದರು. ಈಗ ಹಾಗಿಲ್ಲ, ಟಿಕೆಟ್ಟಿಗೂ ಚಿಲ್ಲರೆ ಹಣಕ್ಕೂ ಅವರೊಡನೆ ವಾಗ್ಯುದ್ಧಕ್ಕೆ ಇಳಿಯಬೇಕು. ತುಂಬಾ ಸಲ ಹೀಗೆ ಆಗಿದೆ. ಬಸ್ಸಿನಲ್ಲಿ ಇದ್ದವರು ನನ್ನನ್ನು ವಿಚಿತ್ರವಾಗಿ ನೋಡುತ್ತಾರೆಯೇ ಹೊರತು, ಯಾರೂ ಅನುಮೋದಿಸುವುದಿಲ್ಲ.

ಒಂದು ತುಂಡು ಕಾಗದ ಹಾಳು ಮಾಡಿದರೂ ಅವರು ಸಹಿಸುತ್ತಿರಲಿಲ್ಲ. ಎಲ್ಲಾದರೂ ಮನೆಯಲ್ಲಿ ೨ ಕಾಳು ಅಕ್ಕಿ, ಬೇಳೆ ಬಿದ್ದಿದ್ದರೆ ತಂದು ಡಬ್ಬಕ್ಕೆ ಹಾಕುತ್ತಿದ್ದರು. ಇದರ ಬೆಲೆ ಎಷ್ಟೇ ಇರಲಿ, ಹಾಳು ಮಾಡಬಾರದು ಎನ್ನುತ್ತಿದ್ದರು. ಇದು, ಅವರು ಒಂದು ತುತ್ತು ಅನ್ನಕ್ಕಾಗಿ ಎಷ್ಟೊಂದು ಕಷ್ಟಪಟ್ಟಿದ್ದಾರೆ ಎನ್ನುವುದನ್ನು ವ್ಯಕ್ತಪಡಿಸುತ್ತದೆ. ಇದರಿಂದ ಈಗ ನಾನು ಗೃಹಿಣಿಯಾಗಿ ಯಾವುದೇ ವಸ್ತುವನ್ನು ಹಾಳು ಮಾಡದೇ ಉಪಯೋಗಿಸುವುದು ರೂಢಿಯಾಗಿಬಿಟ್ಟಿದೆ.

ನಮ್ಮ ಮಾತಿನಲ್ಲಿ, ಉಚ್ಚಾರದಲ್ಲಿ ಸ್ಪಷ್ಟತೆ ಇರಬೇಕು. ಉಚ್ಚಾರ ಹೆಚ್ಚು-ಕಡಿಮೆ ಆದರೂ ಹತ್ತು ಸಲ ಕಂಠಪಾಠ ಮಾಡಿಸುತ್ತಿದ್ದರು. ಊಟಕ್ಕೆ, ಓದಲು ಕುಳಿತಾಗ ಆಸನ ಹಾಕಿಕೊಂಡು ಸರಿಯಾಗಿ ನೇರವಾಗಿ ಕೂಡಬೇಕಿತ್ತು. ಸ್ವಲ್ಪ ಗೂನುಬೆನ್ನು ಮಾಡಿದರೂ ಬಂದು ನಿಂತು ಸರಿಯಾಗಿ ಕೂಡಿಸುತ್ತಿದ್ದರು. ಗಂಡು-ಹೆಣ್ಣು ಎಂಬ ಭೇದವಿಲ್ಲದೇ ಅವರು ನಮ್ಮನ್ನು ಬೆಳೆಸಿ ದರು. ಶಾಲೆ ಬಿಟ್ಟ ತಕ್ಷಣ ಓಡಿ ಬಂದು ಗೂಡು ಸೇರಿದರೆ, 'ಮುಖೇಡಿಗಳಂತೆ ಇರಬೇಡಿ, ಎಲ್ಲ ರಂಗದಲ್ಲಿಯೂ ಕಾರ್ಯೋನ್ಮುಖರಾಗಿ ಚಟುವಟಿಕೆಯಿಂದ ಇರಬೇಕು' ಎನ್ನುತ್ತಿದ್ದರು.

ಇನ್ನು ವ್ಯಾಪಾರದ ವಿಷಯ. ಅವರು ಸಂಜೆಯ ಹೊತ್ತಿಗೆ ಅಂಗಡಿಗೆ ಬರುತ್ತಿದ್ದರು. ೭ ವರ್ಷದ ಹುಡುಗಿಯಿಂದ ನನಗೆ ಅಂಗಡಿಗೆ ಹೋಗಿ ಕೂಡುವ ಅಭ್ಯಾಸವಿತ್ತು. ಮನೆಗೆ ಅಂಗಡಿಗೆ ೨ ಫರ್ಲಾಂಗ್ ಅಂತರ. ಆಗಿನ ದಿನಗಳಲ್ಲಿ ನನ್ನ ಗಮನಕ್ಕೆ ಬಂದ ಒಂದು ಅನುಭವ ಇದು. ಸುಮಾರು ೧೬-೧೭ ವರ್ಷದ ಹುಡುಗರು ಪತ್ತೇದಾರಿ ಕಾದಂಬರಿಗಳನ್ನು ಕೇಳಿಕೊಂಡು ಬರುತ್ತಿದ್ದರು. ಅವರು ಇದ್ದಾಗ ಬಂದರೆ, 'ನೀವು ಚಿಕ್ಕ ಹುಡುಗರು, ಈ ವಯಸ್ಸಿಗೆ ಪತ್ತೇದಾರಿ ಕಾದಂಬರಿಗಳನ್ನು ಓದುವುದೇ? ಬುದ್ಧಿ ಇದೆಯೆ?' ಎಂದು ಬೈದು ಓಡಿಸಿಬಿಡುತ್ತಿದ್ದರು. ಚಿಕ್ಕ ಹುಡುಗರು ಪತ್ತೇದಾರಿ ಕೇಳಿದರೆ ಅವರಿಗೆ ತುಂಬಾ ಕೋಪ ಬರುತ್ತಿತ್ತು. ಮತ್ತೆ ಯಾವಾಗಲಾದರೂ ಆ ಹುಡುಗರು ಬರುವಾಗ ದೊಡ್ಡಪ್ಪ ಅಂಗಡಿಯಲ್ಲಿ

ಇರುವುದನ್ನು ನೋಡಿದರೆ ಮೆಟ್ಟಿಲು ಹತ್ತುತ್ತಿರಲಿಲ್ಲ, ಅಲ್ಲಿಂದಲೇ ತಿರುಗಿ ಹೋಗಿಬಿಡುತ್ತಿದ್ದರು: 'ಏ ಅವರು ಬೈತಾರೋ ಮಾರಾಯ, ಇನ್ನೊಮ್ಮೆ ಅವರಿಲ್ಲಾಗ ಬರೂಣಂತ ನಡಿ' ಎಂದು ಹೇಳಿಕೊಂಡು ಹೋಗಿಬಿಡುತ್ತಿದ್ದರು. ಈ ದೃಶ್ಯ ನನಗೆ ಕಣ್ಣಿಗೆ ಕಟ್ಟಿದಂತಿದೆ. ಯಾವ ಪುಸ್ತಕವಾದರೇನು, ವ್ಯಾಪಾರ ಮಾಡುವುದು ನಮ್ಮ ಧರ್ಮ, ವೃತ್ತಿ, ದುಡ್ಡು ಬಂದರೆ ಸಾಕು ಎಂದು ಯಾವತ್ತೂ ಯೋಚಿಸುತ್ತಿರಲಿಲ್ಲ. ನಮ್ಮ ಹೊಟ್ಟೆಪಾಡಿಗಾಗಿ ಯುವಪೀಳಿಗೆಯನ್ನು ಹಾಳು ಮಾಡಬಾರದೆಂಬ ಮನೋಭಾವನೆ. ಮನೆಯಲ್ಲಾದರೂ ನಮಗೆ ಅಂತಿಂಥ ಪುಸ್ತಕ ಓದುವುದು, ಹುಚ್ಚುಚ್ಚು ಸಿನೇಮಾ ನೋಡುವುದು ನಿಷಿದ್ಧ. ಅವರು ಅಥವಾ ನಮ್ಮ ತಂದೆ ಆರಿಸಿಕೊಟ್ಟ ಪುಸ್ತಕಗಳನ್ನಷ್ಟೇ ಓದುವುದಿತ್ತು.

ಅಂಗಡಿಯಲ್ಲಿ ಗಿರಾಕಿಗಳು ಯಾರಾದರೂ ಬೆಲೆಯ ಬಗ್ಗೆ ಚೌಕಾಶಿ ಮಾಡಿದರೆ ಅವರು ದೂರ್ವಾಸಮುನಿಯೇ ಆಗುತ್ತಿದ್ದರು (ಅಷ್ಟು ಸಿಟ್ಟು). 'ಸ್ವಾಮಿ; ಇಲ್ಲಲ್ಲ ಚೌಕಾಶಿ ಮಾಡುವುದು, ಸರದಿಯಲ್ಲಿ ಗಂಟೆಗಟ್ಟಲೆ ನಿಂತು ಅವರು ಹೇಳಿದಷ್ಟು ದುಡ್ಡು ಕೊಟ್ಟು ಟಿಕೆಟ್ ಕೊಂಡು ಸಿನಿಮಾ ನೋಡಿ ಬರುತ್ತೀರಲ್ಲ ಅಲ್ಲಿ ಮತ್ತು ಖುಶಿಯಿಂದ ಹೇಳಿದಷ್ಟು ದುಡ್ಡು ಕೊಟ್ಟು ಹೋಟೆಲಿನಲ್ಲಿ ತಿಂಡಿತಿಂದು ಬರುತ್ತೀರಲ್ಲ, ಅಲ್ಲಿ ಚೌಕಾಶಿ ಮಾಡಿರಿ' ಎಂದು ಗಡಸು ಧ್ವನಿಯಲ್ಲಿ ಹೇಳುತ್ತಿದ್ದರು. ಇದರಿಂದ ಎಷ್ಟೋ ಗಿರಾಕಿಗಳು ಸಿಟ್ಟಿನಿಂದ ತಿರುಗಿ ಹೋದದ್ದೂ ಇದೆ.

ನಮ್ಮ ತಂದೆ ಇಲ್ಲದಾಗ ಅಂಗಡಿಗೆ ಯಾರಾದರೂ ಗಿರಾಕಿಗಳು ಪುಸ್ತಕಗಳನ್ನು ಕೇಳಿಕೊಂಡು ಅಥವಾ ಇನ್ನಾವುದೇ ವಿವರ ಕೇಳಿಕೊಂಡು ಬಂದರೆ, ಅವರಿಗೆ ಗೊತ್ತಿದ್ದರೆ ಸರಿ; ತೆಗೆದುಕೊಡುತ್ತಿದ್ದರು, ಮಾಹಿತಿ ಒದಗಿಸುತ್ತಿದ್ದರು. ಇಲ್ಲದಿದ್ದರೆ ಸ್ಪಷ್ಟವಾಗಿ 'ನನಗೆ ಇದರ ಬಗ್ಗೆ ಗೊತ್ತಿಲ್ಲ, ನನ್ನ ತಮ್ಮ ಅಂಗಡಿ ನೋಡಿಕೊಳ್ಳುವವನು, ಅವನು ಇಲ್ಲ, ಒಂದು ಗಂಟೆ ಬಿಟ್ಟು ಬನ್ನಿ, ಇಲ್ಲವೇ ನಾಳೆ ಬನ್ನಿ,' ಎಂದು ಹೇಳುತ್ತಿದ್ದರು. ನನಗೆ ಗೊತ್ತಿಲ್ಲ ಎನ್ನುವುದು ಅವಮಾನ ಎಂದು ಅವರೆಂದೂ ಭಾವಿಸಿರಲಿಲ್ಲ. ಮನೆಗೆ ಎಲ್ಲ ತರಹದ ಲೇಖಕರು, ಸಾಹಿತಿಗಳು ಬರುತ್ತಿದ್ದರು. ವೈಚಾರಿಕವಾಗಿ ಗಮನಹರಿಸುವ ವಯಸ್ಸು ಇರಲಿಲ್ಲ, ಗೆಳತಿಯರ ಹತ್ತಿರ ನಮ್ಮ ಮನೆಗೆ ಇಂಥವರೆಲ್ಲ ಬರುತ್ತಾರೆ ಎಂದು ಅಭಿಮಾನದಿಂದ ಹೇಳಿಕೊಳ್ಳುತ್ತಿದ್ದೆ. ಪ್ರಕಾಶನದ ಬಗ್ಗೆ ಅವರಿಂದ ಹೆಚ್ಚಿಗೆ ತಿಳಿದುಕೊಳ್ಳಬೇಕು ಎನ್ನುವ ಮನಸ್ಸು, ವಯಸ್ಸು ಬರುವಾಗ ಅವರು ಬೆಂಗಳೂರಿಗೆ ಹೋಗಿ ನೆಲೆಯೂರಿದರು.

ಈಚೆಗೆ ಎಂದರೆ ಆಗಸ್ಟ್ ೧೨, ೧೯೯೩ರಂದು ಬೆಂಗಳೂರಿಗೆ ಒಂದು ಕಾರ್ಯಕ್ರಮಕ್ಕೆ ಹೋದಾಗ ದೊಡ್ಡಪ್ಪನನ್ನು ನೋಡಲೆಂದೇ ಅವರ ಮನೆಗೆ ಹೋಗಿದ್ದೆವು. ನಾವು ೨-೩ ಗಂಟೆ ಇದ್ದು ತಿರುಗಿ ಹೋಗಬೇಕೆಂದು ಹೋಗಿದ್ದು. ಆದರೆ ಆ ರಾತ್ರಿ ಅವರಲ್ಲಿ ಉಳಿಯಬೇಕೆಂಬ ಅವರ ಮನಸ್ಸಿನ ಆಸೆಯನ್ನು ಈಡೇರಿಸಲು ಅಲ್ಲಿಯೇ ಉಳಿದೆವು. ಇದು ಅವರಿಗೆ ತುಂಬಾ ಸಂತೋಷ ತಂದಿತು. ಮರುದಿನ ಬೆಳಗ್ಗೆ ತುಂಬು ಉತ್ಸಾಹದಿಂದ ಮನೆ ತುಂಬ ಓಡಾಡಿದರು. ಮನೆಯ ಜನಕ್ಕೆಲ್ಲ ತಕ್ಷಣ ಅವರಲ್ಲಿಯ ಈ ವ್ಯತ್ಯಾಸ ಕಂಡು ಬಂದಿತು. ಮರುದಿನ ಸಂಜೆ ನಮ್ಮನ್ನು ಅರೆ ಮನಸ್ಸಿನಿಂದ ಬೀಳ್ಕೊಟ್ಟರು. ಅದೇ ಅವರ ಕೊನೆಯ ದರ್ಶನವಾಯಿತು. ನಾನು ಇದನ್ನು ನಿರೀಕ್ಷಿಸಿರಲಿಲ್ಲ.

ಹುಬ್ಬಳ್ಳಿಯಲ್ಲಿ ಇದ್ದವರ ಪೈಕಿ ಮತ್ತು ಅವರ ಒಡನಾಟದಲ್ಲಿ ಬಂದವರಲ್ಲಿ ನಾನೇ ಹಿರಿಯಳಾದ್ದರಿಂದ ಅವರಿಗೆ ನನ್ನ ಮೇಲೆ ಮಮತೆ ಜಾಸ್ತಿ ಇತ್ತು. ನನಗೂ ಅವರ ಬಗ್ಗೆ ತುಂಬಾ ಪೂಜ್ಯಭಾವನೆ ಬೆಳೆದು ಬಂದಿತ್ತು. ನನ್ನ ಮದುವೆಯಾದಾಗ ನನ್ನ ಯಜಮಾನರಿಗೆ ಕೆಲಸವಿರಲಿಲ್ಲ. ನಂತರ ಧಾರವಾಡದ ಆಕಾಶವಾಣಿಯಲ್ಲಿ ಕೆಲಸ ಸಿಕ್ಕಿದಾಗ, ನಮ್ಮ ಮಗಳ ಕಾಲ್ಗುಣದಿಂದ ಕೆಲಸ ಸಿಕ್ಕಿತು ಎಂದು ತುಂಬಾ ಹೆಮ್ಮೆ ಪಟ್ಟುಕೊಂಡು ನನ್ನ ಮಾವನವರಿಗೆ ಕಾಗದ ಬರೆದಿದ್ದರು.

ಒಟ್ಟಿನಲ್ಲಿ ಜೀವನದಲ್ಲಿ ಶಿಸ್ತು, ಅಚ್ಚುಕಟ್ಟುತನ, ಪ್ರಾಮಾಣಿಕತೆ, ಸಮಯಪಾಲನೆ, ಪರೋಪಕಾರ ಬುದ್ಧಿ, ಪ್ರತಿಫಲಾಪೇಕ್ಷೆ ಇಲ್ಲದೇ ಸಹಾಯ ಮಾಡುವುದು, ದುಂದುವೆಚ್ಚಕ್ಕೆ ಕಡಿವಾಣ, ಉಪಕಾರ ಸ್ಮರಣೆ, ಆಹಾರ ವಸ್ತುಗಳನ್ನು ಹಾಳು ಮಾಡದಿರುವುದು ಇವೆಲ್ಲ ಅವರಿಂದ ನನಗೆ ರಕ್ತಗತವಾಗಿ ಬಂದ ಬಳುವಳಿಗಳು.

## ಶ್ರೀ ಎಂ. ಪದ್ಮನಾಭಯ್ಯ, ಧಾರವಾಡ

'ಋಣಾನುಬಂಧ ರೂಪೇಣಾ ಪಶು ಪತ್ನಿ ಸುತಾಲಯ' ಎಂಬ ಉಕ್ತಿಯಂತೆ ಕನ್ನಡ ಪುಸ್ತಕ ಪ್ರಕಾಶನದ ಎಲೆಮರೆಯ ಸಾಹಸಿ ಮ. ಗೋವಿಂದರಾಯರು ಹಾಗೂ ನಮ್ಮ ಒಡನಾಟ, ಸಂಬಂಧ ನೆಂಟಸ್ತಿಕೆಯಿಂದಲೇ ಪ್ರಾರಂಭವಾದುದು ಒಂದು ದೈವೀಯೋಗ, ನನ್ನ ಬದುಕಿನಲ್ಲಿ ನಡೆದ ಒಂದು ಪವಾಡ. ನನ್ನ ಬದುಕಿನ ಮಹತ್ತರ ತಿರುವಿಗೆ ಕಾರಣರಾದ ಇವರು ಹಾಗೂ ಇವರ ಮನೆತನದವರು ಪೂಜನೀಯ ವ್ಯಕ್ತಿಗಳು. ಕನ್ನಡ ಎಂ.ಎ., ಪದವಿ ಮುಗಿಸಿ ೭-೮ ವರ್ಷಗಳ ಕಾಲ ಎಲ್ಲೂ ಸರಿಯಾದ ಕೆಲಸವಿಲ್ಲದೆ ಒಂದು ರೀತಿಯ ನಿರಾಶಾಜೀವನ ನಡೆಸುತ್ತಿದ್ದ ಸಮಯದಲ್ಲಿ ಮ. ಗೋವಿಂದರಾಯರ ತಮ್ಮಂದಿರಾದ, ನನ್ನ ಮಾವಂದಿರಾಗಿರುವ ಶ್ರೀ ಎಂ. ಅನಂತಮೂರ್ತಿಗಳು ಒಂದು ಮುಂಜಾನೆ ನಮ್ಮ ಊರಿಗೆ ಬಂದರು. ಬಂದಿದ್ದ ಉದ್ದೇಶ, ತಮ್ಮ ಹಿರಿಯ ಮಗಳನ್ನು ನನಗೆ ಕೊಟ್ಟು ಮದುವೆ ಮಾಡುವ ಪ್ರಸ್ತಾಪವಿಟ್ಟಾಗ ಒಂದು ರೀತಿಯ ಹುಚ್ಚು ಧೈರ್ಯದಿಂದಲೇ ಒಪ್ಪಿಗೆ ನೀಡಿದೆ. ಸಾಗರದ ಶ್ರೀ ರಾಘವೇಂದ್ರಸ್ವಾಮಿ ಮಠದ ವ್ಯವಸ್ಥಾಪಕರಾಗಿದ್ದ ಶ್ರೀ ಪಿ.ವಿ. ಹೊಳ್ಳ ಎಂಬುವರ ಮಧ್ಯಸ್ಥಿಕೆಯಿಂದ ನಮ್ಮ ಮದುವೆ ನಡೆಯಿತು.

ಈ ರೀತಿ ಪ್ರಾರಂಭವಾದ ನಮ್ಮ ಹಾಗೂ ಶ್ರೀ ಮ. ಗೋವಿಂದರಾಯರ ಸಂಬಂಧ, ಒಡನಾಟ ಅವರ ಕೊನೆಯ ದಿನಗಳವರೆಗೂ ಅನೂಚಾನವಾಗಿ ನಡೆದು ಬಂದಿತು. ಅವರ ಜೊತೆಗೆ ಅನೇಕ ಸಂದರ್ಭಗಳಲ್ಲಿ ಒಟ್ಟಿಗೆ ಇರುವ ಅವಕಾಶ ಲಭಿಸಿದ್ದವು. ಮದುವೆಯಾದ ಹೊಸತರಲ್ಲಿ ಬೆಂಗಳೂರಿನ ಅವರ ಮನೆಗೆ ಹೋದಾಗ ಒಂದು ವಾರ ಕಾಲ ಅವರಲ್ಲಿಯೇ ಉಳಿಸಿಕೊಂಡರು. ಆಗ ನನಗೆ ಜೀವನಾಧಾರಕ್ಕೆ ಏನೂ ಕೆಲಸವಿರಲಿಲ್ಲ. ಆದಾಗ್ಯೂ ಬೇಸರ ತೋರಿಸದೇ ಪ್ರೀತಿ ಗೌರವಗಳನ್ನು ತೋರಿಸಿದರು. ಅನಿರೀಕ್ಷಿತವಾಗಿ ನಮ್ಮ ಮದುವೆ ನಡೆದ ೬-೭ ತಿಂಗಳುಗಳಲ್ಲಿ ಧಾರವಾಡದ ಆಕಾಶವಾಣಿಯಲ್ಲಿ ನನಗೆ ಕೆಲಸ ದೊರೆಯಿತು. ೧೯೮೧

ರಲ್ಲಿ ನಾವು ಧಾರವಾಡದಲ್ಲಿ ಮನೆ ಮಾಡಿದಾಗ ಕಾರ್ಯಾರ್ಥವಾಗಿ ಬಂದಿದ್ದ ಶ್ರೀ ಗೋವಿಂದ ರಾಯರು ನನ್ನ ಮನೆಗೂ ಬಂದು ೩-೪ ದಿನವಿದ್ದರು. ಈ ಸಂದರ್ಭದಲ್ಲಿ ಅವರನ್ನು ತೀರ ಹತ್ತಿರದಿಂದ ಅವಲೋಕಿಸುವ ಅವಕಾಶ ದೊರೆಯಿತು. ಅಲ್ಲಿದ್ದ ೩-೪ ದಿನ ಬೆಳಗ್ಗೆ ಸಾಧನಕೇರಿಯ ಕಡೆಗೆ ವಾಕಿಂಗ್ ಕರೆದುಕೊಂಡು ಹೋದಾಗ, ತಮ್ಮ ವೃತ್ತಿಜೀವನದ ಸಂಕ್ಷಿಪ್ತರೂಪವನ್ನು ನನ್ನೆದುರು ಬಿಚ್ಚಿಟ್ಟಿದ್ದರು.

ಅವರ ಒಡನಾಟದಿಂದ ನನಗೆ ಕಂಡುಬಂದ ಕೆಲವು ವಿಷಯಗಳಲ್ಲಿ ಗೋವಿಂದರಾಯರು ತಮ್ಮ ಅಭಿಪ್ರಾಯವನ್ನು ಯಾರ ಮೇಲೂ ಹೊರಿಸದೆ ಅವರವರ ನಂಬಿಕೆ, ಅನಿಸಿಕೆಗಳಿಗೆ ಬೆಲೆ ಕೊಟ್ಟು ಸಹಕರಿಸುತ್ತಿದ್ದರು. ಒಂದು ರೀತಿಯಲ್ಲಿ ಗೋವಿಂದರಾಯರು ತಮ್ಮ ಹೋರಾಟ ಮಯ ಜೀವನದಲ್ಲಿ ಸದ್ದು-ಗದ್ದಲವಿಲ್ಲದೆ, ಪ್ರಚಾರಕ್ಕೆ ಸಿಗದೆ ಕನ್ನಡ ಸಾಹಿತ್ಯ-ಸರಸ್ವತಿಯ ಸೇವೆ ಸಲ್ಲಿಸಿದರೆಂದು ಹೇಳಬಹುದು. ಮುಂದೆ ಬೆಂಗಳೂರಿನ ಅವರ ಮನೆಗೆ ಹೋದಾಗ ಅವರು ತಮ್ಮ ಮಕ್ಕಳ ಜೊತೆ ವ್ಯವಹಾರದ ಬಗ್ಗೆ ಚರ್ಚೆ ನಡೆಸುತ್ತಿದ್ದರು. ಮನೆಯಲ್ಲಿ ಒಂದು ನಿಮಿಷವನ್ನೂ ವ್ಯರ್ಥಮಾಡದೇ ಪುಸ್ತಕಗಳ ಕರಡು ತಿದ್ದುವುದರಲ್ಲಿಯೋ, ಲೆಕ್ಕಪತ್ರ ಗಳ ತಪಾಸಣೆಯಲ್ಲಿಯೋ ಕಾಲ ಕಳೆಯುತ್ತಿದ್ದರಷ್ಟೆ. ನೆಂಟರಿಷ್ಟರು ಬಂದಾಗಲೂ ಕೂಡ ಈ ಕೆಲಸಕ್ಕೆ ವ್ಯತ್ಯಯ ಮಾಡಿಕೊಳ್ಳದೆ, ಬಂದವರಿಗೆ ಸೂಕ್ತ ಆತಿಥ್ಯ ದೊರೆಯುವಂತೆ ನೋಡಿಕೊಂಡು, ತಾವೂ ಅವರ ಜೊತೆ ಕಷ್ಟ-ಸುಖಗಳಲ್ಲಿ ಭಾಗಿಯಾಗುತ್ತಿದ್ದರು. ಹುಬ್ಬಳ್ಳಿಗೆ ಬಂದಾಗ ಅಲ್ಲಿಯೂ ಮನೆಯಲ್ಲಿ ಹಾಗೂ ಅಂಗಡಿಗಳಲ್ಲಿ ಕರಡು ತಿದ್ದುವ ಕೆಲಸ ಮಾಡು ತ್ತಿದ್ದರು (ಬೆಂಗಳೂರಿನಿಂದ ಬರುವಾಗಲೇ ತಂದಿರುತ್ತಿದ್ದರು). ಗೋವಿಂದರಾಯರು ಯಾರೊಡನೆಯೂ ಬೇಸರ, ಅಸಹನೆ ತೋರಿಸಿದ ವ್ಯಕ್ತಿಯಲ್ಲವೆಂದೇ ನನ್ನ ಭಾವನೆ. ಎಂತಹ ಭಿನ್ನಾಭಿಪ್ರಾಯಗಳು ಬಂದಾಗ್ಯೂ ತಮ್ಮ ಹಠ ಸಾಧಿಸದೇ, ತಮ್ಮ ಅಭಿಪ್ರಾಯವೇ ಸರಿಯೆಂದು ಒತ್ತಡ ಹೇರದೆ ಆದಷ್ಟು ನಿಷ್ಪಕ್ಷಪಾತವಾಗಿ ಬಗೆಹರಿಸಲು ನೋಡುತ್ತಿದ್ದರು. ಅವರ ಜೀವಿತದ ಕೊನೆಯ ದಿನಗಳಲ್ಲಿ ಅವರನ್ನು ಕಾಣಲು ಬೆಂಗಳೂರಿಗೆ ಹೋದಾಗ ನಮ್ಮನ್ನು ಕಂಡು ಅಂತಹ ಸ್ಥಿತಿಯಲ್ಲೂ ಹರ್ಷವದನರಾಗಿ ಮಾತನಾಡಿದರು.

ಶ್ರೀ ಗೋವಿಂದರಾಯರು ತಮ್ಮ ಒಡನಾಟಕ್ಕೆ ಬಂದ ವ್ಯಕ್ತಿಗಳಿಗೆ, ಸಂಬಂಧಿಗಳಿಗೆ ಒಂದಲ್ಲ ಒಂದು ರೀತಿ ನೆರವು, ಸಹಾಯ ನೀಡಿ 'ಕರ್ಮದಲ್ಲಿ ಆಸಕ್ತಿಯುಳ್ಳವನೂ, ಉದಾ ಸೀನನಂತೆಯೂ ಇರುವ ನನ್ನನ್ನು ಆ ಕರ್ಮಗಳು ಬಂಧಿಸುವುದಿಲ್ಲ' ಎಂಬ ಗೀತಾ ಉಕ್ತಿಯಂತೆ ಬಾಳಿದವರು. ಅವರೇ ಅನುವಾದಿಸಿರುವ ಮಹಾತ್ಮಾ ಗಾಂಧೀಜಿಯವರ 'ನನ್ನ ಆರಂಭ ಜೀವನ'ದಲ್ಲಿ ಬಂದಿರುವಂತೆ, ನೀತಿಯೇ ಜಗತ್ತಿನ ಆಧಾರ, ಸತ್ಯವೇ ನೀತಿಯ ಜೀವಾಳ ಎಂದು ಪ್ರಾಮಾಣಿಕತೆಗೆ ಒತ್ತು ಕೊಟ್ಟವರು.

ಹಸಿದವಗೆ ಒಳಿತೆಳಸಿ ಭಕುತಿಯಿಂದಲೆ ಬಾಗಿ
ಹಸಿದವಗೆ ದಾಹವನು ಅಮೃತಾನ್ನವುಣಿಸಿ
ಅರೆಕಾಸನಿತ್ತವಗೆ ವರಹಗಳನೆ ನೀಡಿ
ಹರಣವಂ ಕಾಯ್ದವಗೆ ಹರಣವನೆ ನೀಗಿ

ಸಿರಿನೆರವನಿತ್ತವಗೆ ಪಿರಿದಾಗಿ ಮಾರ್ಜುಡುವ
ಪರಿಯೆ ಅರಿಧರ ತೆರಸವೆಂದು ಅರಿಯೈ
ಪರಿ ಬಗೆಯ ಸಂತರೋ ನರರೊಳಂತರವಿಡವೆ
ಪರುಷದಿಂ ಕೇಡಿಗಳಿಗೊಳಿತನೆಸಗುವರು.

ಎಂಬ ಈ ಉಕ್ತಿ ಗೋವಿಂದರಾಯರ ಬದುಕಿಗೆ ತುಂಬಾ ಚನ್ನಾಗಿ ಅನ್ವಯಿಸುತ್ತದೆ.

**ಶ್ರೀ ಸುಬ್ರಹ್ಮಣ್ಯ, ಹುಬ್ಬಳ್ಳಿ**

ದೊಡ್ಡಪ್ಪ ತೀರಿಕೊಳ್ಳುವ ಒಂದೆರಡು ವರ್ಷಗಳ ಮೊದಲು ಅಂಗಡಿಗೆ ಹೋಗುವುದನ್ನು ನಿಲ್ಲಿಸಿದ್ದರು. ಆದರೂ ಅಂಗಡಿಗೆ ಬರುತ್ತಿದ್ದ ಅಂಚೆಯೆಲ್ಲವನ್ನೂ ಮನೆಗೆ ತರಿಸಿಕೊಂಡು ನೋಡುವುದು, ಲೆಕ್ಕ ಬರೆಯುವುದು ಮಾಡುತ್ತಿದ್ದರು. ಅವರ ಮನಸ್ಸಿಗೆ ಬೇಕಾಗಿದ್ದರೂ ದೇಹ ಕೈ ಕೊಡುತ್ತಿದ್ದುದರಿಂದ ಕ್ರಮೇಣ ಈ ಕೆಲಸಗಳೂ ಕಡಿಮೆ ಆಗುತ್ತಿರುವಂತೆ ತೋರುತ್ತಿತ್ತು. ಆಗ ದೊಡ್ಡಪ್ಪನನ್ನು ನೋಡಿದಾಗಲೆಲ್ಲ ನನಗೆ ತುಂಬಾ ಸಂಕಟವಾಗುತ್ತಿತ್ತು. 'ಹೇಗೇ ಇದ್ದರೂ ಪರವಾಗಿಲ್ಲ; ಒಟ್ಟಿನಲ್ಲಿ ಬದುಕಿ ಇದ್ದರೆ ಸಾಕು, ತೀರಿಕೊಳ್ಳುವುದು ಬೇಡ' ಎಂದು ಮನಸ್ಸಿನಲ್ಲಿಯೇ ಪ್ರಾರ್ಥಿಸುತ್ತಿದ್ದೆ. ದೊಡಪ್ಪನಿರದ ನಮ್ಮ ಮನೆ, ಅಂಗಡಿಗಳನ್ನು ನನ್ನಿಂದ ಊಹಿಸಿಕೊಳ್ಳುವುದೂ ಕಷ್ಟವೆನಿಸುತ್ತಿತ್ತು. ಅವರ ಅಸ್ತಿತ್ವವೇ ನಮಗೆ ದೊಡ್ಡ ಆಧಾರದಂತೆ ನನಗೆ ಕಂಡಿತ್ತು.

ಅವರು ಹಾಸಿಗೆಯಲ್ಲಿಯೇ ಇರುತ್ತಿದ್ದ ದಿನಗಳಲ್ಲಿ ನಾನು ಬೆಂಗಳೂರಿಗೆ ಹೋದಾಗಲೆಲ್ಲ ಅವರ ರೂಮಿಗೆ ಹೋಗಿ, 'ನಾನು ದೊಡ್ಡಪ್ಪ, ಸುಬ್ಬು!' ಎನ್ನುತ್ತಿದ್ದೆ. 'ಯಾವಾಗ ಬಂದಿ? ಶೈಲಾ ಮಕ್ಕಳು ಬಂದಿದಾರೇನು? ಹುಬ್ಬಳ್ಳಿಯಲ್ಲಿ ಹೇಗಿದ್ದಾರೆ? ಅನಂತಮೂರ್ತಿ ಚನ್ನಾಗಿದ್ದಾನೇನು?' ಇತ್ಯಾದಿ ಪ್ರಶ್ನೆಗಳಿಗೆ ಉತ್ತರಿಸಿ ಹೊರಬರುತ್ತಿದ್ದಂತೆ ನನ್ನ ಮನಸ್ಸು ಸಂಕಟಕ್ಕೊಳಪಡುತ್ತಿತ್ತು. ಅವರ ಈ ಸಂದರ್ಭದ ಮನಸ್ಸಿನಲ್ಲಿ ಏನೇನು ಯೋಚನೆಗಳಿರಬಹುದು? ಅವರ ಕನಸು ಉಸಿರು ಎಲ್ಲವೂ ಆಗಿದ್ದ ಅಂಗಡಿಯ ಕುರಿತು ಅವರ ಕನವರಿಕೆಗಳೇನಿರಬಹುದು? ಅಂಗಡಿಗೆ ಸಂಬಂಧಿಸಿದಂತೆ ನನ್ನನ್ನೂ ಒಳಗೊಂಡಂತೆ 'ಮಗಂದಿರ' ಬಗ್ಗೆ ಅವರ ವಿಚಾರಗಳೇನಿರಬಹುದು? ಎಂಬೆಲ್ಲ ಪ್ರಶ್ನೆಗಳು ನನ್ನನ್ನು ಮುತ್ತುತ್ತಿದ್ದವು. ಅವರ ಆಕಾಂಕ್ಷೆಯಂತೆಯೇ ನಾವು ಕೆಲಸ ಮಾಡುತ್ತಿದ್ದೇವೆಯೇ? ಎಂಬ ಆತ್ಮಾವಲೋಕನದ ಪ್ರಶ್ನೆ ಎದ್ದಾಗ ನಿಜಕ್ಕೂ ತುಂಬ 'ಗಿಲ್ಟಿ'ಯಾಗಿಬಿಡುತ್ತಿದ್ದೆ.

ದೊಡ್ಡಪ್ಪ ಖಂಡಿತ ಶ್ರಮಜೀವಿ. ಬೆಳಗಿನಿಂದ ರಾತ್ರಿವರೆಗೂ ಕೆಲಸ ಮಾಡುತ್ತಿರುವುದರಲ್ಲಿಯೇ ಅವರು ತೃಪ್ತಿಕಾಣುತ್ತಿದ್ದರೆಂಬುದರಲ್ಲಿ ಸಂಶಯವಿಲ್ಲ. ಈ ಕೆಲಸ ಕೆಲಸ ಕೆಲಸಗಳ ಮಧ್ಯೆ ಮಕ್ಕಳಿಗೆ ಜವಾಬ್ದಾರಿ ಹೊರೆಸಿ, ಒಬ್ಬೊಬ್ಬರಿಗೊಂದೊಂದರಂತೆ ಕೆಲಸ ವಹಿಸಿಕೊಟ್ಟು, ಒಂದು Proper Planning ಮಾಡುವುದರಲ್ಲಿ ಅವರೇ ತಪ್ಪಿಬಿಟ್ಟರೋ? ಮಗಳಂದಿರೇನೋ ಗಂಡಂದಿರ ಮನೆಗೆ ಹೋಗಿ ಚನ್ನಾಗಿಯೇ ಇದ್ದು ಆ ಬಗ್ಗೆ ದೊಡ್ಡಪ್ಪನಿಗೆ ತುಂಬ

ತೃಪ್ತಿ ಒದಗಿಸಿದ್ದಾರೆ. ಆದರೆ, ಮಗಂದಿರಿಂದ ದೊಡ್ಡಪ್ಪನಿಗೆ ಇದು ದೊರಕಿತೆ? ಎಂದೆಲ್ಲ ಪ್ರಶ್ನಿಸಿಕೊಳ್ಳುತ್ತಿದ್ದಂತೆ ತುಂಬ ಬೇಸರವೆನಿಸುತ್ತಿತ್ತು. ಏನೊಂದು ಮಾಡಲೂ ತೋಚದೆ ಒದ್ದಾಡುತ್ತಿದ್ದೆ. ದೊಡ್ಡಪ್ಪನೇ ಎಷ್ಟೋ ಸಲ ಕೇಳುತ್ತಿದ್ದರು: 'ನಮಗೆ ಯಾರು ಯಾವ ಕೆಲಸ ವಹಿಸಿಕೊಟ್ಟರು? ನಾವು ನಾವೇ ಬೆಳೆಯಲಿಲ್ಲವೆ?' ಎಂದು. (ಇಲ್ಲಿ 'ನಾವು' ಎಂಬ ಪದವನ್ನೇ ಅವರು ಬಳಸುತ್ತಿದ್ದುದು ಗಮನಾರ್ಹ.)

ದೊಡ್ಡಪ್ಪ ತಾವು ಮಾತ್ರ ಬೆಳೆಯಲಿಲ್ಲ ತಮ್ಮನನ್ನೂ, ಇತರ ಬಂಧುಗಳನ್ನೂ ಜೊತೆ ಜೊತೆಗೆ ಬೆಳೆಸಿದರು. ಕಷ್ಟದ ಬಾಲ್ಯವೇನೋ ಆ ಕಾಲದ ಎಲ್ಲರೂ ಅನುಭವಿಸಿದವರೇ ಇರಬಹುದು. ಆದರೆ ಕಷ್ಟದೊಂದಿಗಿನ ಕುತೂಹಲಕರ ಬಾಲ್ಯ ಇವರದು. ಆ ಬಗ್ಗೆ ಅವರೆಂದೂ ಹೇಳಿರಲಿಲ್ಲ. ಊರಿನಲ್ಲಿ 'ಬೆಳೆಯಲು' ಅಸಾಧ್ಯವೆನಿಸಿಯೋ ಅಥವಾ ಬೇರಾವ ಕಾರಣಕ್ಕೋ ಅವರ ತಂದೆಯ ಗೊಣಗಾಟವನ್ನೂ ಲೆಕ್ಕಿಸದೆ ಧಾರವಾಡಕ್ಕೆ ಬಂದುಬಿಟ್ಟರಂತೆ. ಅಲ್ಲಿ ಭಾವನ ಆಶ್ರಯಕ್ಕಿಂತ ಹೆಚ್ಚಾಗಿ ಅವರು ಆಯ್ದುಕೊಂಡುದು ದಿ|| ಬುರ್ಲಿ ಬಿಂದುಮಾಧವಾಚಾರ್ಯರಂತಹ ಹಲವರ ಮನೆಯ ವಾರಾನ್ನವಂತೆ. ಅಲ್ಲಿ ದಿ|| ಶ್ರೀ ಗೋಪಾಲಕೃಷ್ಣರಾಯರಂಥ ಅತ್ಯಂತ ಆತ್ಮೀಯ ಬಂಧುವೊಬ್ಬನ 'ಕಂಪನಿ'ಯ ಸವಿಯೊಂದಿಗೆ ಧಾರವಾಡದ ಸಾಹಿತಿಗಳ, ಸ್ವಾತಂತ್ರ್ಯ ಹೋರಾಟಗಾರರ ಒಡನಾಟ ಲಭಿಸಿದ್ದುದೆಲ್ಲ ನಾನು ಅವರಿವರಿಂದ ಕೇಳಿ ಬಲ್ಲೆ. ಆದರೆ ಇವಾವುದನ್ನೂ ದೊಡ್ಡಪ್ಪನಿಂದ ನೇರ ಕೇಳಿ ತಿಳಿದುಕೊಳ್ಳುವ ಭಾಗ್ಯ ನನಗೆ ಕೊನೆಯವರೆಗೂ ಕೂಡಿಬರಲಿಲ್ಲ. ಅವರು ತಾವಾಗಿಯೇ ತಮ್ಮ ಆ ಕಾಲದ ಬಾಳನ್ನು ಎಂದೂ, ಯಾರೊಂದಿಗೂ ಬಣ್ಣಿಸಿದ್ದುದು ನಾನಂತೂ ಕೇಳಿಲ್ಲ.

ಶ್ರೀ ಅರ್ಜುಣಗಿ ರಾಮಣ್ಣರೆಂಬುವವರು ಇತ್ತೀಚಿನ ವರ್ಷಗಳವರೆಗೂ ಹುಬ್ಬಳ್ಳಿಯ ನಮ್ಮ ಅಂಗಡಿ ಮನೆಗಳಿಗೆ ಬಂದು ಹೋಗಿ ಮಾಡುತ್ತಿದ್ದರು. ಅವರಿಂದ ಎಂದಾದರೊಮ್ಮೆ ಇಂಥ ವಿಷಯ ಕೇಳುತ್ತಿದ್ದೆ. ಆದರೆ ಇಂತಹ ಮಾತುಕತೆ ನಡೆಯುತ್ತಿರುವಷ್ಟರಲ್ಲೆ ಏನೋ ಅಡಚಣೆಗಳಿಂದಾಗಿ ಮಾತು ಬೇರೆಡೆ ತಿರುಗಿಬಿಡುತ್ತಿತ್ತು. ಇಂತಹವರೆ, ದಿ|| ಶ್ರೀ ಅನಂತ ಗೌಡರೆಂಬುವವರು ನಮ್ಮ ಮನೆಯ ಹತ್ತಿರವೇ ಇರುತ್ತಿದ್ದರು. ಅವರು ಆ ಕಾಲದ ಪೊಲೀಸ್ ಪಾಟೀಲರಾಗಿದ್ದರೂ, ಶ್ರೀ ಅರವಿಂದರ, ರವೀಂದ್ರನಾಥ ಟಾಗೋರರ ಪ್ರಭಾವಕ್ಕೊಳಗಾದವರಾಗಿದ್ದರು. ಅವರು ಮೊದಲಿಂದಲೂ ನಮಗೆ ತುಂಬ ಬೇಕಾದವರೆಂದೂ, ಅಜ್ಜ ಬಾವಿ ಹಾರಿಕೊಂಡು ಸತ್ತಾಗ ಈ ಅನಂತಗೌಡರಿಂದ ತುಂಬ ಉಪಕಾರವಾಗಿತ್ತೆಂದೂ, ಏನೋ ಸಂದರ್ಭ ಬಂದಾಗ ಅಪ್ಪ ಹೇಳುತ್ತಿದ್ದ. ಈಗ ನಾಲ್ಕಾರು ವರ್ಷಗಳ ಹಿಂದೆ ನಾನು ಅನಂತಗೌಡರ ಮನೆಗೊಮ್ಮೆ ಮದುವೆಯ ಆಮಂತ್ರಣ ಪತ್ರಿಕೆಯನ್ನೇನೋ ಕೊಡುವ ನಿಮಿತ್ತ ಹೋಗಿದ್ದೆ. ಅವರೇ ಇದ್ದರು. ಪತ್ರಿಕೆ ಕೊಟ್ಟು ಹೇಳಿದ್ದಾದ ಮೇಲೆ, ನನ್ನನ್ನು ಕಂಡು, 'ಕೂಡು, ಕೂಡು' ಎಂದು ಕುರ್ಚಿ ತೋರಿಸಿದರು. 'ಗೋವಿಂದ ಹೆಂಗಿದ್ದಾನ?' ಎಂದು ಮಾತು ಆರಂಭಿಸಿ, 'ನಿಮ್ಮ ಅಂಗಡಿ ಹೆಂಗ, ಎಲ್ಲೆ ಸುರು ಆತು ಅಂತs ಗೊತ್ತದs ಏನು ನಿನಗ?' ಎಂದರು.

"ಬ್ರಿಟಿಷರು ಗೋವಿಂದನ್ನ ಒಳಗ ಹಾಕೋರಿದ್ದಾರ ಅಂತ ಗೊತ್ತಾದ ಕೂಡ್ಲೆ ಇಂವ ತಪ್ಪಿಸಿಕೊಂಡು ಓಡಿಹೋದ. ತಂಗಿ ಮನಿ ಅಲ್ಲಿ ಇಲ್ಲೆ ಮಾರಿs ತಪ್ಪಿಸಿ ಅಡ್ಡಾಡಿ ೫-೬

ತಿಂಗಳಾದ ಮ್ಯಾಲೆ ಬಂದ. ಆವಕ ಮೊದಲ ಧಾರವಾಡದಾಗ 'ಸಾಹಿತ್ಯ ಮಂದಿರ' ಅಂತ, ೩-೪ ಮಂದಿ ಕೂಡಿ, ಮಾಡ್ಕೊಂಡಿದ್ರು. ನಡಸ್ತಿದ್ದೋಂವ ಗೋವಿಂದ ಮತ್ತ ಇನ್ನೊಬ್ಬಾತ. ಇಂವ ಹೊಳ್ಳಿ ಬಂದಿಂದ, 'ಅಂಗಡಿ ನಂದs ಇದು. ನಿನಗೇನು ಕೆಲಸ ಇಲ್ಲೆ?' ಅಂದಬಿಟ್ಟಂವ. ಗೋವಿಂದಗೂ ಮನಸು ಮುರೀತ. ನಾವೊಂದಷ್ಟು ಮಂದಿ ಅಂದ್ರ, ನಾನು, ಪ್ರಹ್ಲಾದ ನರೇಗಲ್ಲ, ಹೇಜೀಬ ರಾಮರಾಯ, ಅರ್ಜುಣಗಿ ರಾಮಣ್ಣ, ಕೂಡ್ಕೊಂಡು ಗೋವಿಂದಗ ಚೂರು ಪಾಲು ಕೊಡಿಸಿಸಿ ಇಲ್ಲೆ ಹುಬ್ಬಳ್ಳಿ ಮರಾಠಾ ಗಲ್ಲಿಯೊಳಗ ನಮ್ಮ 'ಸರಸ್ವತಿ ವಿದ್ಯಾರಣ್ಯ ವಾಚನಾಲಯ' ಅದ ಅಲಾs ಅದರ ಪಾವಟಣಗಿ ಬಾಜುಕಿನ ಜಾಗ ಕೊಟ್ವಿ. ಅಲ್ಲೇ ಇಂವ 'ಸಾಹಿತ್ಯ ಭಾಂಡಾರ' ಅಂತ ಸುರು ಮಾಡಿದ." ನನಗಾಗಲೀ, ನಮ್ಮ ಯಾರಿಗೇ ಆಗಲಿ ಬಹುಶಃ ಗೊತ್ತಿರದ ಸಾಹಿತ್ಯ ಭಂಡಾರದ ಜನ್ಮಸ್ಥಳದ ಕುತೂಹಲ ಇತ್ತಲ್ಲಿ. ಅವರು ಹೇಳುತ್ತಿದ್ದ ಧಾಟಿಯೂ ತುಂಬ ಆತ್ಮೀಯವಾಗಿತ್ತು. ಇನ್ನೂ ಏನೋ ಮುಂದುವರೆಸಲು ಬಾಯಿ ತೆರೆ ಯುತ್ತಿದ್ದ ಗೌಡರನ್ನು ಅವರ ಮಗಳು ಪ್ರಭಾ ಚಹಾ ತಂದುಕೊಡುತ್ತ 'ಯಾರಾದ್ರೂ ಕೇಳೋರು ಸಿಕ್ಕಿಬಿಟ್ರ ಸಾಕು ಅಪ್ಪಾಜಿಗೆ, ಪುರಾಣ ಹಚ್ಚಿಬಿಡ್ತಾರ' ಎಂದು ನಗುತ್ತಲೇ ಅರ್ಧ ವಿರಾಮ ಕೊಟ್ಟಳು. ನನಗೂ ಆಮಂತ್ರಣ ಪತ್ರಿಕೆ ಹಂಚುವ ಕೆಲಸದ ಒತ್ತಡವಿದ್ದುದರಿಂದ ಕುತೂಹಲ ಅದುಮಿಕೊಂಡು ಹೊರಬಂದೆ. ಮತ್ತೆಂದಾದರೂ ಗೌಡರ ಮನೆಗೆ ಬರಬೇಕೆಂದು ಕೊಂಡೆ. ಆ 'ಮತ್ತೆಂದಾದರೂ' ಬರಲೇ ಇಲ್ಲ. ಗೌಡರು ತೀರಿಹೋದರು. ದೊಡ್ಡಪ್ಪ ಮನೆ ಹಾಸಿಗೆ ಬಿಟ್ಟು ಮತ್ತೆಲ್ಲಿಯೂ ಹೋಗುತ್ತಿರಲಿಲ್ಲ. ಅನಂತಗೌಡರ ಮಗ ದಯಾನಂದ ನನ್ನ ಆತ್ಮೀಯ ಸ್ನೇಹಿತ. ಅವನು ಹೇಳಿದ: 'ಸುಬ್ಬು, ನಿಮ್ಮ ದೊಡ್ಡಪ್ಪವರಿಂದ ಪತ್ರ ಬಂದದ. ನಮ್ಮ ತಂದೆ ಯವರು ತೀರಿಕೊಂಡದ್ದು ಗೊತ್ತಾಗಿ ಬರದಾರ. ನಮ್ಮ ತಂದೆಯವರಿಂದ ಅವರಿಗೆ ಬಹಳ ಉಪಕಾರವಾಗಿತ್ತಂತ. ಹಿರಿಯಣ್ಣ, ಬಂಧು ಎಲ್ಲವ್ವೂ ಆಗಿದ್ದರಂತ. ಭಾಳ ಛಂದ ಬರದಾರೋ, ಅಕ್ಷರ ಇನ್ನೂ ಎಷ್ಟು ಛಂದ ಅವನೋ ಅವ್ರವು' ಅಂದ. ಈ ನಿಶ್ಶಕ್ತಿಯ ದಿನಗಳಲ್ಲೂ ದೊಡ್ಡಪ್ಪ ಸೌಜನ್ಯ ಬಿಡಲಿಲ್ಲ. ಗೆಳೆಯನ ಬಂಧುವೊಬ್ಬನ ಅಗಲಿಕೆಯ ನೋವನ್ನು ಅವರ ಮನೆಯವರೊಂದಿಗೆ ಹಂಚಿಕೊಂಡಿದ್ದರು.

ಅಂಗಡಿಗೆ ಬರುತ್ತಿದ್ದ ವಯೋವೃದ್ಧರೊಬ್ಬರು ಒಮ್ಮೆ ಗಲ್ಲ ಗಲ್ಲ ಬಡೆದುಕೊಳ್ಳುತ್ತ ಹೇಳಿದ ಮಾತಂತೂ ನನಗೆ ಈಗಲೂ ಆಗಾಗ ಕಿವಿಯಲ್ಲಿ ರಣರಣಿಸುತ್ತ ಅವರ ಮುಖ ಕಣ್ಮುಂದೆ ಬರುತ್ತಿರುತ್ತದೆ: 'ನಿಮ್ಮ ದೊಡ್ಡಪ್ಪ, ಅಪ್ಪ ಪಟ್ಟಂತ ಕಷ್ಟ ಯಾರಿಗೂ ಬರಬಾರದಪ. ದಿನಾ ಧಾರವಾಡ, ಹುಬ್ಬಳ್ಳಿ ನಡಕೊಂತ ಅಡ್ಡಾಡತಿದ್ದರು. ಮಜಾಕ್ಯ ಅಂತ ಅಲ್ಲಾ ರೊಕ್ಕ ಇರತಿದ್ದಿಲ್ಲಾ. ಇರೋ ಸ್ವಲ್ಪ ರೊಕ್ಕ ನಾಳೆ ಬ್ಯಾರೆ ಕೆಲಸಕ್ಕ ಬೇಕಾ ಗಿರ್ತಿದ್ವು. ಒಂದs ಒಪ್ಪತ್ತ ಊಟ, ಒಮ್ಮೊಮ್ಮೆ ಬರೇ ಸೇಂಗಾ ಬೆಲ್ಲದಾಗ ದಿನ ದೂಗಿಸತಿದ್ರು.'

ಬೀದಿ ದೀಪದ ಕೆಳಗೆ ಓದಿ ದೊಡ್ಡವರಾಗಿದ್ದು ೫-೬ ಮೈಲಿ ದೂರ ನಡೆದು ಶಾಲೆ ತಲುಪುತ್ತಿದ್ದುದು ಮುಂತಾಗಿ ತುಂಬ ರಂಜನೀಯವಾಗಿ ಹಿಗ್ಗಿಸಿ ಎಲ್ಲೆಂದರಲ್ಲಿ ಹೇಳುವ ಹಿರಿಯರನ್ನು ನಾನು ಕಂಡಿದ್ದೇನೆ. ಆದರೆ ದೊಡ್ಡಪ್ಪ ಎಂದೂ ಇಂತಹ ವಿಷಯಗಳನ್ನು ಹೇಳಿದ್ದು ನಾನು ಕೇಳಿಲ್ಲ. ಹುಬ್ಬಳ್ಳಿ, ಧಾರವಾಡ ನಡೆದುಕೊಂಡೇ ಓಡಾಡುತ್ತಿದ್ದ ವಿಷಯ ಈ

ವಯೋವೃದ್ಧರು ಹೇಳಿದ ೬-೭ ವರ್ಷಗಳ ಮೊದಲು ನಾನು ಬೆಂಗಳೂರಿನಲ್ಲಿ ಓದುತ್ತಿದ್ದಾಗಿನ ನೆನಪು ಬಂತು. ಅಲ್ಲಿಗೆ ಹೋದ ಮೊದಲ ವರ್ಷವೇ ಅದು. ಬಸ್ಸಿಗೂ, ಇತರ ಖರ್ಚಿಗೆಂದೂ ದುಡ್ಡು ಬೇಕಾಗಿತ್ತು. ರಾತ್ರಿ ಊಟದ ನಂತರ ದೊಡ್ಡಪ್ಪನ ಕೋಣೆಗೆ ಹೋಗಿ ಕೇಳಿದೆ. ಏನೊಂದು ಮಾತಾಡದೆ ಕಪಾಟಿನಿಂದ 'ನೂರರ ನೋಟನ್ನೆತ್ತಿ' ಕೊಟ್ಟಿದ್ದರು. ಈ ಎರಡೂ ಘಟನೆಗಳೂ ನನ್ನ ಕಣ್ಣೆದುರು ಒಂದೇ ಫ್ರೇಮಿನಲ್ಲಿ ಅಕ್ಕಪಕ್ಕ ನಿಲ್ಲುತ್ತಿರುತ್ತವೆ.

ಬೆಂಗಳೂರಿನಲ್ಲಿ ನಾನು ಕೆಲಸಕ್ಕೆ ಹೋಗುವ ಸಂದರ್ಭದ ನೆನಪು ಆಗಾಗ ಬರುತ್ತಿರುತ್ತದೆ. ಹುಬ್ಬಳ್ಳಿಯ ಮನೆಯಿಂದ ಅಲ್ಲಿಯ ಅಂಗಡಿಗೆ ಹೊರಡುವ ಸಮಯದಲ್ಲಿ ಸಾಮಾನ್ಯವಾಗಿ ಒಂಬತ್ತು ಒಂಭತ್ತೂವರೆಯಾದರೂ ಉಪಾಹಾರ ತಯಾರಾಗಿರುತ್ತಿರಲಿಲ್ಲ. ಅದೇ ಬೆಂಗಳೂರಿನಲ್ಲಿ ನಾನು ಕೆಲಸಕ್ಕೆ ಹೋಗುತ್ತಿದ್ದ ಜಾಗ ಮನೆಯಿಂದ ಸನಿಹದ ರಸ್ತೆಯಿಂದಲೇ ೧೪ ಕಿ.ಮಿ. ದೂರವಿತ್ತು. ಎಂಟು ಗಂಟೆಗೆ ಅಲ್ಲಿ ತಲ್ಪಬೇಕಿತ್ತು. ಆರೂವರೆಗೆ ಏಳುತ್ತಿದ್ದೆ. ಆರೂ ಮುಕ್ಕಾಲಿಗೆ ನಾನು ಸ್ನಾನಕ್ಕೆ ಹೋಗುವಷ್ಟರಲ್ಲಿ ನನಗೆ ಅಗತ್ಯವಿರುವಷ್ಟೇ ನೀರನ್ನು ದೊಡ್ಡಪ್ಪ ಹಂಡೆಯಲ್ಲಿ ತುಂಬಿ ಕಾಯಿಸಿಟ್ಟಿರುತ್ತಿದ್ದರು. ಸ್ನಾನ ಮುಗಿಸಿ, ಹೊರಬರುವಷ್ಟರಲ್ಲಿ ದೊಡ್ಡಮ್ಮ ನನ್ನ ಡಬ್ಬದಲ್ಲಿ ಚಪಾತಿ-ಪಲ್ಯವನ್ನೋ, ಪುಳಿಯೋಗರೆಯನ್ನೋ ತುಂಬಿಡುತ್ತಿದ್ದರು. ತಿಂಡಿ, ಕಾಫಿ ಮುಗಿಸಿ ನಾನು ಏಳು, ಏಳೂಕಾಲಿಗೆ ಮನೆಬಿಡುತ್ತಿದ್ದೆ. ನನ್ನ ನಂತರ ಉಳಿದವರ ಸ್ನಾನ, ತಿಂಡಿ ಏನಿದ್ದರೂ ಒಂಭತ್ತರ ನಂತರವೇ ಆಗುತ್ತಿತ್ತು. ಆದರೆ ನನಗಾಗಿ ಬರೀ ದೊಡ್ಡಪ್ಪ ಮಾತ್ರ ಅಲ್ಲ; ದೊಡ್ಡಮ್ಮ ಕೂಡ ಅಷ್ಟು ಬೆಳಗ್ಗೆ ಈ ಎಲ್ಲ ವ್ಯವಸ್ಥೆಗಳನ್ನು ಸ್ವಂತಮಗ ನಿಗೆಂಬಂತೆಯೇ ಮಾಡುತ್ತಿದ್ದುದು ನೆನಪಾಗುತ್ತಿರುತ್ತದೆ.

ಈ ದೊಡ್ಡತನಗಳಿಂದ ಕೂಡ ಇವರು ನನಗೆ ದೊಡ್ಡಪ್ಪ, ದೊಡ್ಡಮ್ಮ ಎಂದು ಆಗಾಗ ಅನಿಸುತ್ತಿರುತ್ತದೆ.

ನನಗೆ ಇವರು ನೀಡಿದಂತಹ ಉಪಚಾರವೋ, ಉಪಕಾರವೋ ಅಥವಾ ಪ್ರೀತಿ, ವಾತ್ಸಲ್ಯಗಳನ್ನೋ ಪಡೆದ ಸುಮಾರು ಜನರಿದ್ದಾರೆ. ಇದಕ್ಕೆ ಪ್ರತಿಯಾಗಿ ಇವರು ಏನನ್ನು ತಾನೆ ನಿರೀಕ್ಷಿಸಿಯಾರು? ನನ್ನೆದುರು ಒಂದು ದಿನ ದೊಡ್ಡಪ್ಪ ಹೇಳಿದರು, 'ನಾನು ಸುಮಾರು ಜನಕ್ಕೆ ಸಹಾಯಮಾಡಿದ್ದೇನೆ. ಅದರಲ್ಲಿ ಮುಖ್ಯವಾಗಿ ಹುಬ್ಬಳ್ಳಿಯ ಅನಂತಮೂರ್ತಿ ಮನೆಗೆ. ಇಲ್ಲಿಯ ಅಣ್ಣಯ್ಯನ ಮನೆಗೆ.' ಈ ಎರಡೂ ಮನೆಗಳು ನನಗೆ ತೀರ ಮುಖ್ಯವಾಗಿದ್ದರಿಂದಲೇ ಈ ಮಾತು ದೊಡ್ಡಪ್ಪ ಹೇಳಿದ್ದರು. ಇದಕ್ಕೆ ಕಾರಣವೂ ಇತ್ತು. ರಾಜನ ಮದುವೆ ಸಂದರ್ಭದಲ್ಲಿ ಹುಬ್ಬಳ್ಳಿಯ ಮನೆಯ ಎಲ್ಲರೂ ಹೋಗಬೇಕಾಗಿದ್ದುದು ನಮ್ಮ ಕರ್ತವ್ಯವಾಗಿತ್ತು, ಅಂತಹದರಲ್ಲಿ ಇಲ್ಲಿಯ ಎಲ್ಲರೂ ಅರ್ಥ ಬೇಕೆಂತಲೋ, ಅರ್ಥ ಅನಿವಾರ್ಯವೆಂತಲೋ ಬೇರೆ ಪ್ರವಾಸ ಹೋಗಿಬಿಟ್ಟರು. ನನ್ನ ಮಾತು ಕೇಳಬಹುದಾಗಿದ್ದ ಅಪ್ಪನಿಗೆ ಮಾತ್ರ ತಾಕೀತು ಮಾಡಿದಾಗ ಪ್ರವಾಸದ ಮಧ್ಯದಿಂದ ಬೆಂಗಳೂರಿಗೆ ಹೊರಡುವುದಾಗಿ ಒಪ್ಪಿಕೊಂಡ. ತಮ್ಮ ಅಶೋಕನಿಗೂ, ಶೈಲಾ ಮತ್ತು ಮಗನಿಗೂ ಇಲ್ಲಿಂದ ನೇರ ಬೆಂಗಳೂರಿಗೆ ಕಳಿಸಿ ಆದಷ್ಟು ಹೆಚ್ಚು ಹುಬ್ಬಳ್ಳಿ ಮನೆಯ ಪ್ರತಿನಿಧಿಗಳಿರುವಂತೆ ನೋಡಿಕೊಂಡೆ. ಆದರೂ ದೊಡ್ಡಪ್ಪನಿಗೆ ಅಮ್ಮ ಅಕ್ಕಂದಿರು ಹೋಗದಿದ್ದುದರಿಂದ ಬರೀ ಬೇಸರವಲ್ಲ; ದುಃಖವೂ ಆಗಿತ್ತು. ಸುಮಾರು ಬಂಧು

ಗಳೊಂದಿಗೆ ಈ ವಿಷಯವನ್ನವರು ಹಂಚಿಕೊಂಡಿದ್ದರು. ನನ್ನೊಂದಿಗೆ, 'ನಿನ್ನ ಮಾತು ಕೇಳ ಲಿಲ್ಲವೇ? ನಿನ್ನ ಅಮ್ಮನಿಗೂ ಅನಿಸ ಲಿಲ್ಲವೆ? ಭಾವಂದಿರೂ ಹೇಳಲಿಲ್ವೇ? ಆ ಕ್ಷೇತ್ರಗಳೆಲ್ಲ ಮುಳುಗಿಹೋಗುವವಿದ್ದವೇನು? ಮಾಡಿದ ಪಾಪ ಹೆಚ್ಚಾಗಿತ್ತೇನೋ?' ಇತ್ಯಾದಿ ಗೊಣಗಾಟದ ನಂತರ, 'ನಿನಗೆ ಗೊತ್ತಾ, ಅನಂತಮೂರ್ತಿ ಅರಸಿಕೆರೇಲಿ ಹೋಟ್ಲಲ್ಲಿದ್ದ. ನಾನು ಕರಕೊಂಡು ಬಂದೆ. ಮುಂದೆ ಪ್ರೇಮಾಳನ್ನು ನೋಡಿ ಮದುವೆಯನ್ನೂ ಮಾಡಿದೆ' ಎಂದರು. ಆ ನಂತರದ ಸಂದರ್ಭದಲ್ಲಿ ನಾನು ಬೆಂಗಳೂರಿಗೆ ಹೋಗಿ, ದೊಡ್ಡಪ್ಪನ ಕೋಣೆಯಲ್ಲಿ ಎದುರಿಸು ತ್ತಿದ್ದ ಕುಶಲ ಪ್ರಶ್ನಾವಳಿಗಳಲ್ಲಿ, 'ಅಕ್ಕಂದಿರು, ಭಾವಂದಿರು ಯಾರಾದರೂ ಬಂದಿದ್ದರೆ? ಹೇಗಿದ್ದಾರೆ ಅವರೆಲ್ಲ?' ಎಂಬುದು ಹಾರಿಹೋಗಿತ್ತು. ಕೇವಲ 'ಅನಂತಮೂರ್ತಿ-ಶೈಲಾ-ಮಕ್ಕಳ' ಸುತ್ತ ಮಾತ್ರ ಇದ್ದುದು ನನ್ನ ಗಮನಕ್ಕೆ ಬರುತ್ತಿತ್ತು.

ಅಂದರೆ, ದೊಡ್ಡಪ್ಪ-ದೊಡ್ಡಮ್ಮ ಇನ್ನೊಬ್ಬರಿಗೆ ಅದ್ಯಾವ ರೀತಿಯ ಸಹಾಯ ಹಸ್ತ ಚಾಚುತ್ತಿದ್ದರೋ ಅವರಿಂದ Materialistic returns ನಿರೀಕ್ಷೆ ಖಂಡಿತ ಮಾಡುತ್ತಿರಲಿಲ್ಲ; ಆದರೆ ಕನಿಷ್ಠಸೌಜನ್ಯದ ಪ್ರತಿಕ್ರಿಯೆ ನಿರೀಕ್ಷಿಸುತ್ತಿದ್ದರು. ತಾವು ಪಡೆದ ಸಹಾಯಕ್ಕೆ ನಿಶ್ಶಕ್ತಿಯಲ್ಲೂ ಗೌಡರಿಗೆ ಪತ್ರ ಬರೆದಾದರೂ ನೆನಪಿಸಿಕೊಂಡಿದ್ದರು.

ನಾನು ದೊಡ್ಡಪ್ಪನ ಮನೆಯಲ್ಲಿ ೪-೫ ವರ್ಷ ಇದ್ದು, ಓದಿದ್ದು ಆ ಮೊದಲಿನ ಅಂಗಡಿಯ ಕುರಿತಾದ ನಮ್ಮ ಕನಸು, ಯೋಜನೆಗಳಿಗನುಗುಣವಾಗಿಯೇ ಇತ್ತು. ಆದರೆ, ನನ್ನ ಓದು ಮುಗಿಯುವಷ್ಟರಲ್ಲಿ ಹುಬ್ಬಳ್ಳಿ-ಬೆಂಗಳೂರು ವ್ಯವಹಾರಗಳು ಬೇರೆಬೇರೆಯೇ ಆಗಲಿ ಎಂಬ ನಿರ್ಧಾರಕ್ಕೆ ದೊಡ್ಡಪ್ಪ ಕೂಡ, ಬಹುಶಃ ತೀರ ಅನಿವಾರ್ಯವಾಗಿಯೋ ಏನೋ, ಬಂದುಬಿಟ್ಟಾಗ ನನ್ನ ಈ ೪-೫ ವರ್ಷಗಳು ಅಂಗಡಿಯ ಮಟ್ಟಿಗೆ ವ್ಯರ್ಥವಾಗಿ ಬಿಟ್ಟವು. ನಂತರ ಹುಬ್ಬಳ್ಳಿಯ ಅಂಗಡಿಯನ್ನು ಚನ್ನಾಗಿಯೇ ಬೆಳೆಸಿದೆ. ಬೆಂಗಳೂರು ಅಂಗಡಿ, ದೊಡ್ಡಪ್ಪ ಇವರಾರ ನೆರವೂ ಇರದೆ ಇಲ್ಲಿ ಸೋದರನೊಂದಿಗೆ ಏಗುವುದು ತುಂಬ ಕಷ್ಟ ಮಾತ್ರವಲ್ಲ; ಎಂದೆಂದಿಗೂ ಅಸಾಧ್ಯ ಎನಿಸಿಬಿಟ್ಟಾಗ ನಾನು 'ಸಾಹಿತ್ಯ ಪ್ರಕಾಶನ' ಹುಟ್ಟು ಹಾಕಿದೆ. ಇದು ಮನೆಯ ನೆರವಿಲ್ಲದೆ, ಅಕ್ಕ-ಭಾವಂದಿರಿಂದ-ಸ್ನೇಹಿತರಿಂದ ಹಣ ಕೂಡಿಹಾಕಿ ಮಾಡಿದ ಧೈರ್ಯವಾಗಿತ್ತು. ದೊಡ್ಡಪ್ಪನ ಮನೆಯ ಋಣವೊಂದು ನನಗೆ ಕಾಡುವ ನೆನಪಾಗಿತ್ತು. ನನ್ನ 'ಸಾಹಿತ್ಯ ಪ್ರಕಾಶನ'ದಿಂದ ಯಾರಿಗೂ ಕೊಡದ ಹೆಚ್ಚಿನ ರಿಯಾಯ್ತಿ ಬೆಂಗಳೂರು ಅಂಗಡಿಗೆ ಕೊಡುವುದೂ, ಅಲ್ಲಿಯ ಮದುವೆ ಇತ್ಯಾದಿ ಕಾರ್ಯಕ್ರಮಗಳಿಗೆ ಸ್ವಲ್ಪ ದೊಡ್ಡ ಮೊತ್ತದ ಕಾಣಿಕೆ ಕೊಡುವುದು ಇತ್ಯಾದಿ ಮಾಡಿದೆ. ಇವೆಲ್ಲ ದೊಡ್ಡಪ್ಪನ ಋಣದೆದುರು ತೀರ ಕ್ಷುಲ್ಲಕವಾಗಿ ನನಗೇ ಕಂಡಿತು. ದೊಡ್ಡಪ್ಪನ ಕೊನೆಗಾಲದಲ್ಲಿ ಬಹುಶಃ ಅವರು ಮಕ್ಕಳಿಗೆ ಗಟ್ಟಿ ನೆಲೆ ಒದಗಿಸಲಿಲ್ಲವೇನೋ ಎಂಬ ಕೊರಗು ಮೂಡಿತೋ ಏನೋ. ನನ್ನ ಬಳಿ ಒಮ್ಮೆ ಹೇಳಿದರು: 'ನಾನು ಹುಬ್ಬಳ್ಳಿಯಿಂದ ಬರುವಾಗ ಏನನ್ನೂ ತರಲಿಲ್ಲ, ಸತ್ಯವತಿ ಕೆಲವು ಪಾತ್ರೆ, ಪಡಗಗಳನ್ನು ತಂದಳೇನೋ ಅಷ್ಟೇ. ಈಗ ಅಲ್ಲಿಂದ ಏನಾದರೂ ಪಡೆಯಬೇಕು ಎಂದನಿಸುತ್ತಿದೆ. ಏನಂತಿ?' ವ್ಯವಹಾರಗಳನ್ನು ಬೇರೆ ಮಾಡಿಕೊಳ್ಳುವ ಸಂದರ್ಭದಲ್ಲೇ ದೊಡ್ಡಪ್ಪ ಇದನ್ನೆಲ್ಲ ಸರಿಯಾಗಿ ಮಾಡಬೇಕಿತ್ತು. ಈಗ ಈ ರೀತಿ ಕೇಳಿದ್ದು ನನಗೆ ತುಂಬ ಕಗ್ಗಂಟೆನಿಸಿತು.

ಹೇಳಿದೆ: 'ದೊಡ್ಡಪ್ಪ, ಅದೂ ಕೂಡ ನಿಮ್ಮದೇ ಅಂಗಡಿ, ಅದರಿಂದ ಎತ್ತಿಕೊಡಲು ನಾನ್ಯಾರು? ನಾನಂತೂ ನನ್ನ ಅಪ್ಪನಿಂದ ಏನೊಂದು ಪೈಸೆಯನ್ನು ಕೂಡ ನಿರೀಕ್ಷಿಸುವುದಿಲ್ಲ, ಅಂಗಡಿಯಿಂದಲೂ ನನಗೆ ಏನೇನೂ ಬೇಡ. ನೀವು ಅಲ್ಲಿಂದ ಏನನ್ನೇ ಪಡೆದರೂ ನನ್ನ ಅಭ್ಯಂತರವೇನೂ ಇರಲು ಸಾಧ್ಯವಿಲ್ಲ' ಎಂದು.

'ಸಾಹಿತ್ಯ ಪ್ರಕಾಶನ' ಆರಂಭಿಸಿದ ಮೇಲೆ ಅದಕ್ಕೆ ನೀರೆರುವುದು, 'ಸಾಹಿತ್ಯ ಭಂಡಾರ' ಬೀಳದಂತೆ ಆತು ನಿಲ್ಲುವುದು ಮಾಡಿಕೊಂಡಿದ್ದೆ. ದೊಡ್ಡಪ್ಪನಿಗೆ ಇದನ್ನು ಹೇಳಿ, ಹುಬ್ಬಳ್ಳಿಯ ಅಂಗಡಿಯ ಸಂಪರ್ಕವನ್ನು ನನಗೆ ನಾನೇ ನಿಲ್ಲಿಸಿದೆ. ಅದೇ ಕಾರಣಕ್ಕೆ ಬೆಂಗಳೂರು ಅಂಗಡಿಗೆ ಕೂಡ ಹೆಚ್ಚುಹೆಚ್ಚಾಗಿ ಹೋಗುವುದನ್ನು ಬಿಟ್ಟೆ. ಆದರೆ ಮನೆಗೆ ಮಾತ್ರ ಹೋಗಿ ದೊಡ್ಡಪ್ಪ, ದೊಡ್ಡಮ್ಮ ಅವರನ್ನು ತಪ್ಪದೆ ಕಂಡುಬರುತ್ತಿದ್ದೆ. ನಾನು ಸರಿದ ನಂತರ ಹುಬ್ಬಳ್ಳಿಯ ಅಂಗಡಿ ನಿಜಕ್ಕೂ ನಾನೆಣಿಸಿದಂತೆಯೇ ಆಗಿದೆ. ಕರುಳು ಕಿವುಚಿ ಬರುವಷ್ಟು ಸಂಕಟ ಆಗುತ್ತದೆ ಅಂಗಡಿ ನೋಡಿದಾಗ. ಆದರೆ ಯಾರು ಏನು ತಾನೇ ಮಾಡಲು ಸಾಧ್ಯ?

ಇದೆಲ್ಲ ನೆನಪಾದಾಗ ದೊಡ್ಡಪ್ಪನಲ್ಲೂ ಅಂಗಡಿ ಮತ್ತು ಮಕ್ಕಳ ಕುರಿತು, Proper Planning ಇರಲಿಲ್ಲವೇನೋ ಎಂದೆನಿಸುತ್ತದೆ. ಇನ್ನೊಬ್ಬರ ಅಸಹಾಯಕತೆಯ-ಅನಾರೋಗ್ಯದ ಸಂದರ್ಭಗಳಲ್ಲೋ, ಇನ್ನಿತರ ಅನಿವಾರ್ಯತೆಗಳಲ್ಲಿ ದೊಡ್ಡಪ್ಪ ಕೊಡುಗೈಯ ಸಹಾಯವನ್ನೇನೋ ಮಾಡಿದ್ದಾರೆ. ಅದೇ ರೀತಿ ಸ್ವಂತ ಜಾಗ, ಮನೆಗಾಗಿ ಅವರು ಸ್ವಲ್ಪವಾದರೂ ಯೋಚಿಸಬೇಕಿತ್ತು. ಹಿಂದೊಮ್ಮೆ ನಾನಾಗಿಯೇ ಈ ಬಗ್ಗೆ ಕೇಳಿದಾಗ, ಅಂಗೈ ಎತ್ತಿ ಬೆಳಕಿಗೆ ಎದುರಾಗಿ ಹಿಡಿದು, ಬೆರಳು ಬೆರಳುಗಳ ನಡುವೆ ಇದ್ದ ಕಿಂಡಿಗಳನ್ನು ತೋರಿಸಿ, 'ನೋಡು ತುಂಬ ಖರ್ಚಿನ ಕೈಯಿದು' ಎಂದಿದ್ದರು. ಇದು ಸಮಾಧಾನವೆನಿಸದೆ ದೊಡ್ಡಪ್ಪನಿಗೆ 'ಭವಿಷ್ಯದ ಬಗ್ಗೆ ಯೋಚಿಸ ಲಾಗದಷ್ಟು 'ಇಂದಿನ' ಕೆಲಸಗಳಿದ್ದುವೋ ಏನೋ! ಎಂಬುದನ್ನು ಗಟ್ಟಿ ಮಾಡಿಕೊಂಡೆ.

ದೊಡ್ಡಪ್ಪನ ಕುರಿತಾಗಿ ಯೋಚಿಸುತ್ತಿರುವಾಗ ನಾನು, ನನ್ನೆಲ್ಲ ಸಹೋದರರ group photo ನನ್ನ ಕಣ್ಣೆದುರು ತಂದುಕೊಂಡು ಯೋಚಿಸುತ್ತೇನೆ. ನಾನು ಕೂಡ ನನ್ನಿಂದ ಹೊರಬಂದು ಬೇರೊಬ್ಬನಾಗಿ ನೋಡುವ ಪ್ರಯತ್ನ ಮಾಡುತ್ತೇನೆ. ತೀರ ನಿಷ್ಕ್ರಿಯ, ಅಧ್ವಾನ್ನ, ವ್ಯರ್ಥಜೀವಿ ಗಳೆಂಬ ಬೇಸರದಿಂದ ದೊಡ್ಡಪ್ಪ ಅಣಕಿಸುವಂತೆ ತೋರಿ ಅದನ್ನು ಅಳಿಸಿಹಾಕಿಬಿಡುತ್ತೇನೆ.

ನಮ್ಮ ದೊಡ್ಡಪ್ಪ ತುಂಬ ಮಹಾನ್ ವ್ಯಕ್ತಿ ಎಂದೇನೂ ಅಲ್ಲ; ಅಥವಾ ಸಮಾಜ ಉದ್ಧಾರಕನೋ, ಸಮಾಜ ಸೇವಕನೋ ಎಂಬ ಹಣೆಪಟ್ಟೆಯ ಅಪೇಕ್ಷೆಯೂ ಅವರಿಗಿರಲಿಲ್ಲ. ಆದರೆ, ಅವರ 'ಅಪ್ಪಟ ಪ್ರಾಮಾಣಿಕತೆ' ಎಂಬುದೊಂದಿತ್ತಲ್ಲ; ಅದನ್ನು ಅವರು ಎಂದಿಗೂ ಬಿಟ್ಟುಕೊಡಲಿಲ್ಲ.

ಬಚ್ಚಲ ಒಲೆಗೆ ತುರುಕುವ ಚಿಪ್ಪನ್ನು ಕೂಡ ಒಡೆದು ಒಂದೇ ಅಳತೆಯ ಹೋಳು ಗಳನ್ನಾಗಿ ಮಾಡಿ, ಒಲೆಯ ಮಧ್ಯ ಭಾಗದಲ್ಲೇ ಇರಿಸಿ ಉರಿಸುತ್ತಿದ್ದುದು, ಅಂಗಡಿಯ ಲೆಕ್ಕದ ಪುಸ್ತಕದಲ್ಲಿ ಒಂದಾದರೂ 'ಚಿತ್‌ಕಾಟ್' ಇರದೆ ಗುಂಡು ಅಕ್ಷರಗಳನ್ನು ಜೋಡಿಸುತ್ತಿದ್ದುದು, ತಟ್ಟೆಯಲ್ಲಿನ ಉಪ್ಪಿಟ್ಟು ಚಮಚದಿಂದ ಬಾಯಿಗೆ ಹಾಕಿಕೊಳ್ಳುವಾಗ ಪ್ರತಿ ತುತ್ತು ಕೂಡ ಮಿಲಿಗ್ರಾಂ ಲೆಕ್ಕದಲ್ಲಿ ಅಳೆದು ಹಾಕಿಕೊಳ್ಳುವರೇನೋ ಎಂಬಷ್ಟು ಸಮ ಅಳತೆ, ಸಮಯ

ತಪ್ಪದ ಊಟ, ನಿದ್ರೆ, ವಾಕಿಂಗ್ ಪ್ರತಿಯೊಂದು ನಿತ್ಯದ ಕೆಲಸಗಳಲ್ಲಿ ಅವರ ಅಚ್ಚುಕಟ್ಟುತನ ಅಸಾಧ್ಯವೆನಿಸುವಂತಿರುತ್ತಿತ್ತು. ಅಂಗಡಿ, ಪ್ರಕಾಶನದ ಕೆಲಸಗಳಲ್ಲೂ ಅವರಿಗಿದ್ದ ಕಠೋರ ಶ್ರದ್ಧೆ ಇಂಥವುಗಳಿಂದ ನಮ್ಮ ದೊಡ್ಡಪ್ಪ ತುಂಬ ಅಪರೂಪದ ವ್ಯಕ್ತಿಯಾಗಿ ನನಗೆ ಕಾಣುತ್ತಾರೆ.

ದೊಡ್ಡಪ್ಪನ ವಾರಿಗೆಯವರ ಸಡಾವಳಿಗಳು ದೇವರು-ಧರ್ಮಗಳ ಪಾಲನೆಗಳನ್ನೆಲ್ಲ ನೋಡಿದಾಗ ಶುಭಾಳ ನೆನಪಾಗುತ್ತದೆ. ವಿದೇಶಿ ಭಾವ ಅವಳನ್ನು ಮೆಚ್ಚಿ ಮುಂದೆ ಬಂದಾಗ, ಶುಭಾ ಕೂಡ 'ಹ್ಞೂ'ಗುಟ್ಟಿದಾಗ ದೊಡ್ಡಪ್ಪನ ಸ್ಥಾನದಲ್ಲಿಯೇ ಬೇರಾರೇ ಇದ್ದರೂ ಭೂಮ್ಯಾಕಾಶಗಳೆರಡನ್ನೂ ಒಂದುಮಾಡುವ ಆರ್ಭಟ ತೋರುತ್ತಿದ್ದರೇನೋ. ಆದರೆ ದೊಡ್ಡಪ್ಪ ಹಾಗೆ ಮಾಡಲಿಲ್ಲ. ಇಬ್ಬರೂ ಪರಸ್ಪರ ಒಪ್ಪಿಕೊಂಡಿದ್ದಾರೆಯೇ ಹಾಗಾದರೆ ಸರಿ, ಎಂದು ಆರ್ಯ ಸಮಾಜದಲ್ಲಿ ಭಾವ ಡ್ಯಾನ್‌ಯಂಗ್‌ನನ್ನು 'ಗಣಪತಿ'ಯನ್ನಾಗಿ ಮಾಡಿ ಸಂಭ್ರಮದಿಂದಲೇ ಮದುವೆ ಮಾಡಿದರು. ಈ ವಾಸ್ತವ ಪ್ರಜ್ಞೆ, Uptodateತನಗಳಿಂದ ನಮ್ಮ ದೊಡ್ಡಪ್ಪ ತುಂಬ ಅಪರೂಪದ ವ್ಯಕ್ತಿ.

ಶಿಕ್ಷಣಕ್ಕಾಗಿ ನಾನು ಬೆಂಗಳೂರಿಗೆ ಹೋಗಿರದಿದ್ದರೆ ಬೇರೆ ಏನಾಗುತ್ತಿದ್ದೆನೋ ಏನೋ? ಆದರೆ ಇವತ್ತಂತೂ ಒಬ್ಬ ಪ್ರಕಾಶಕನಾಗಿದ್ದೇನೆ. ಈ ನನ್ನ ವೃತ್ತಿಗಾಗಿ ದೊಡ್ಡಪ್ಪನಿಂದ ನಾನು ಕಲಿತದ್ದು, ಪಡೆದದ್ದು ಬಹಳ. ಸ್ಫೂರ್ತಿ ಕೂಡ ದೊಡ್ಡಪ್ಪನೇ. ಯಾವ ಋಣ ಕೂಡ ತೀರಿಸಬಹುದು; ಆದರೆ ಸ್ಫೂರ್ತಿ ಎಂಬುದರ ಋಣತೀರುವೆ ಸಾಧ್ಯವಾಗದು.

## ಶ್ರೀ ಪಂಡಿತ ಚಂದ್ರಕಾಂತ, ಬೆಂಗಳೂರು

೧೯೬೩. ಆಗಿನ್ನೂ ನನ್ನ ಉದ್ಯೋಗದ ಪ್ರಾರಂಭದ ದಿನಗಳು. ನನ್ನ ಮೇಲಧಿಕಾರಿ ಶ್ರೀ ನಾಗರಾಜ್ ಒಂದು ಸಲ ನನಗೆ ಭೈರಪ್ಪನವರ 'ಧರ್ಮಶ್ರೀ' ಕಾದಂಬರಿಯನ್ನು ಕೊಟ್ಟರು, ಓದಿದೆ. ಕಾದಂಬರಿಯಲ್ಲಿ ಹೊಸತೇನೂ ಕಾಣಲಿಲ್ಲ. ಆದರೆ ಅಂತಹ ಪುಸ್ತಕವನ್ನು, ಅದೂ ಕನ್ನಡದಲ್ಲಿ ಪ್ರಕಟಿಸಿರುವ ಸಾಹಸದವರನ್ನು ಕಂಡು ನನಗೆ ಬಹಳ ಆಶ್ಚರ್ಯವಾಗಿತ್ತು.

ಇದಾದ ಒಂದು ವಾರದಲ್ಲಿಯೇ ನಮ್ಮಣ್ಣ ಶ್ರೀ ರಾಮದಾಸ್ ಅವರು ಹುಬ್ಬಳ್ಳಿಯಿಂದ ತಕ್ಷಣ ಬಾ ಎಂದು ಕಾಗದ ಬರೆದಿದ್ದರು. ಹೀಗಾಗಿ ಹುಬ್ಬಳ್ಳಿಗೆ ಹೋದೆ. ನಮ್ಮಣ್ಣನಿಗೆ ಮೊದಲಿನಿಂದಲೂ ಪುಸ್ತಕ ಓದುವ ಹುಚ್ಚು ಜಾಸ್ತಿ, ಹೆಚ್ಚಾಗಿ ಕೊಳ್ಳುತ್ತಿದ್ದ. ಈ ಕಾರಣದಿಂದ ನನ್ನನ್ನು ಅಲ್ಲಿಯ 'ಸಾಹಿತ್ಯ ಭಂಡಾರ'ಕ್ಕೆ ಕರೆದೊಯ್ದ. ನನ್ನನ್ನು ಅಂಗಡಿಯಲ್ಲಿದ್ದ ಒಬ್ಬರಿಗೆ ತೋರಿಸುತ್ತ 'ಇವನು ನನ್ನ ತಮ್ಮ' ಎಂದ. ಅವರನ್ನು ನೋಡಿದ ಕೂಡಲೇ ಇವರೊಬ್ಬ ವಿಶೇಷ ವ್ಯಕ್ತಿ ಎನ್ನುವಂಥದ್ದೇನೂ ಇರಲಿಲ್ಲ. ಆದರೆ ಅವರು ನೋಡಿದ ರೀತಿ, ಅವರ ಕಣ್ಣಲ್ಲಿದ್ದ ಬೆಳಕು ನನ್ನನ್ನು ಸೆರೆಹಿಡಿಯಿತು. ನಾನು ಮಾತನಾಡುವ ಮೊದಲೇ ಅವರು ಒಂದು ಪುಸ್ತಕವನ್ನು ಕೊಟ್ಟು 'ನೀವು ಓದಿದ್ದೀರೇನೋ?' ಎಂದರು. ಆ ಪುಸ್ತಕ ಬಹುಶಃ ಆಗಷ್ಟೇ ಪ್ರಕಟವಾಗಿದ್ದ 'ದೂರಸರಿದರು'. ಭೈರಪ್ಪನವರ ಎರಡನೇ ಕಾದಂಬರಿ. ಇಲ್ಲ ಎಂದೆ. 'ಹಾಗಾದರೆ ಓದಿ ನೋಡಿ' ಎಂದು ಪುಸ್ತಕವನ್ನು ನಮ್ಮ ಕೈಯಲ್ಲಿಟ್ಟರು. ಅಣ್ಣ ಹಣ ಕೊಟ್ಟ.

ಇಡೀ ರಾತ್ರಿಯೆಲ್ಲ 'ದೂರ ಸರಿದರು' ಓದಿ ಮುಗಿಸಿದೆ. ಬೆಳಗ್ಗೆ ಮತ್ತೆ 'ಸಾಹಿತ್ಯ ಭಂಡಾರಕ್ಕೆ ಹೋದೆ. ಅಷ್ಟು ಬೇಗ ಓದಿ ಮುಗಿಸಿದ್ದನ್ನು ಗೋವಿಂದರಾಯರು ಮೆಚ್ಚಿದರು. 'ಇಡೀ ರಾತ್ರಿ ನಿದ್ದೆಗೆಡೋ ಅವಶ್ಯಕತೆ ಏನಿತ್ತು?' ಎಂದು ಕೇಳಿದರು. ಅವರ ಧ್ವನಿಯಲ್ಲಿ ನನ್ನ ಬಗ್ಗೆ ತೋರಿಸುತ್ತಿರುವ ಅವರ ಆಸ್ಥೆ ವ್ಯಕ್ತವಾಗಿತ್ತು. ಮತ್ತೆ ಅಲ್ಲಿಯೇ ಇನ್ನೂ ಕೆಲವು ಕನ್ನಡ ಪುಸ್ತಕಗಳನ್ನು ಕೊಂಡೆ. ಸುಮಾರು ೬೦ ರೂಪಾಯಿಗಳಷ್ಟು ಬಿಲ್ ಆಗಿತ್ತು. ಪುಸ್ತಕಗಳನ್ನು ನಾನು ಚೀಲದಲ್ಲಿ ಇರಿಸಿಕೊಳ್ಳುತ್ತಿದ್ದಾಗ ಅವರು ಕೇಳಿದರು: 'ಏನಾದ್ರು ಬರೀತಿರೇನು?'

ನನ್ನ ಪಾಲಿಗೆ ಇದು ಮುಜುಗರದ ಪ್ರಶ್ನೆ. ಅವರ ಪ್ರಶ್ನೆಗೆ ಉತ್ತರಿಸದೆ ಬೇರೆ ಏನೋ ಮಾತಾಡಿದೆ. ಮಾತು ಹಾಗೇ ಅರ್ಧಗಂಟೆ ಸಾಗಿತ್ತು. ಕನ್ನಡ, ಕನ್ನಡ ಸಾಹಿತ್ಯ, ನಮ್ಮವರ ಅನಾಸಕ್ತಿ ಈ ಎಲ್ಲವೂ ಮಾತಿನಲ್ಲಿ ಬಂದು ಹೋದವು.

೧೯೬೬ರವರೆಗೂ ನನಗೆ ತಿಂಗಳಿಗೆ ಎರಡು ಮೂರು ಬಾರಿ ಹರಿಹರದಿಂದ ಹುಬ್ಬಳ್ಳಿಗೆ ಪ್ರಯಾಣ ಇರುತ್ತಲೇ ಇತ್ತು. ಹುಬ್ಬಳ್ಳಿಯ ಕಾರ್ಯಕ್ರಮಗಳಲ್ಲಿ ನನಗೆ ಅತ್ಯಂತ ಪ್ರಿಯವಾದದ್ದು ಮಂ. ಗೋವಿಂದರಾಯರೊಡನೆ ಮಾತಾಡುವುದು. ಇವರು ಹಲವಾರು ಬಾರಿ ಮನೆಗೆ ಊಟಕ್ಕೆ ಕರೆದರೂ ನಾನು ಹೋಗಿರಲಿಲ್ಲ. ಹೀಗಾಗಿ ಒಂದೆರಡು ಸಲ ಅಂಗಡಿಯಲ್ಲೇ ತಿಂಡಿ ತರಿಸಿ ಕೊಟ್ಟಿದ್ದರು. ನಾನು ತಿಂಡಿ ಪೊಟ್ಟಣ ಒಡೆಯುವಾಗ ಅವರು ಮುಂದೆ ಬಂದು ತಾವೇ ಕೈ ಹಾಕಿ ಕೇವಲ ಒಂದು ಚಿಟಿಕೆಯಷ್ಟು ತೆಗೆದುಕೊಂಡು ಬಾಯಿಗೆ ಹಾಕಿಕೊಳ್ಳುತ್ತಿದ್ದರು. ಒಂದು ರೀತಿಯಲ್ಲಿ ತಾವು ನನಗೆ company ಕೊಟ್ಟಂತೆ ಭಾವ ಮೂಡಲಿ ಎಂದು. ಆ ದಿನಗಳು ನನ್ನ ಜೀವನದ ಅತ್ಯಂತ ಉತ್ತಮ ದಿನಗಳೆಂದು ಹೇಳಬೇಕು.

೧೯೬೫ರಲ್ಲಿ ಹುಬ್ಬಳ್ಳಿಯ ಪ್ರಸಿದ್ಧ ಖಾಸಗಿ ನರ್ಸಿಂಗ್‌ಹೋಮ್‌ನಲ್ಲಿ ನಮ್ಮ ತಾಯಿಯವರಿಗೆ ಶಸ್ತ್ರ ಚಿಕಿತ್ಸೆ ಆಯಿತು. ನಾನು ಅಮ್ಮನನ್ನು ನೋಡಲು ಹೋಗಿದ್ದೆ. ಅದೇ ಸಂಜೆ ಸಾಹಿತ್ಯ ಭಂಡಾರಕ್ಕೂ ಹೋದೆ. ಬಂದ ಕಾರಣ ತಿಳಿಸಿದೆ. ಎಂದಿನಂತೆ ಒಂದೆರಡು ಪುಸ್ತಕಗಳನ್ನು ಕೊಂಡೆ. ಹಣ ಕೊಡಲು ಹೋದಾಗ ಗೋವಿಂದರಾಯರು, 'ಈಗ ಬೇಡ, ಆಸ್ಪತ್ರೆ ಖರ್ಚಿಗೆ ಬೇಕಾದೀತು, ಆಮೇಲೆ ಕೊಡಿ' ಎಂದರು.

ಈ ಮಧ್ಯೆ ಎಸ್.ಎಲ್. ಭೈರಪ್ಪನವರ ಪುಸ್ತಕಗಳನ್ನು ನನ್ನ ಸಹಪಾಠಿಗಳಲ್ಲಿ, ನನ್ನ ಒಡನಾಡಿಗಳಲ್ಲಿ ಮಾರಿದೆ. ಚಿತ್ರದುರ್ಗ, ಶಿವಮೊಗ್ಗ ಜಿಲ್ಲೆಗಳಲ್ಲಿ ಬಹಳಷ್ಟು ಜನರು ಅವನ್ನು ಕೊಂಡರು. ಪ್ರತಿಸಾರಿ ಹುಬ್ಬಳ್ಳಿಗೆ ಹೋದಾಗ ನಾನು ಮಾರಿದ ಪುಸ್ತಕಗಳ ಮೇಲೆ ಅವರು ಕಮಿಷನ್ ಕೊಡಲು ಪ್ರಯತ್ನಿಸಿದ್ದುಂಟು.

ನಮ್ಮ ಅಮ್ಮ ೧೯೬೬ರ ಫೆಬ್ರವರಿ ಐದರಂದು ನಮ್ಮನ್ನು ಅಗಲಿದರು. ಸಾಮಾನ್ಯವಾಗಿ 'ಶುಭ' ದಿನಗಳಂದು ಸಮೀಪದ ಬಂಧುಗಳು, ಆತ್ಮೀಯರು, ಕರ್ತೃಗಳಿಗೆ ಹೊಸಬಟ್ಟೆ ಅಥವಾ ದೂರದಲ್ಲಿದ್ದರೆ ಹಣವನ್ನು ಕಳಿಸುವ ಪದ್ಧತಿ ನಮ್ಮಲ್ಲಿದೆ. ಆ ದಿನದಂದು ಗೋವಿಂದರಾಯರಿಂದ ಅನಿರೀಕ್ಷಿತವಾಗಿ ಐವತ್ತು ರೂಪಾಯಿಗಳ ಒಂದು ಎಂ.ಓ. ಬಂದಿತು. ಅದೇ ದಿನ ತುಂಬಾ ಅನುಕೂಲಸ್ಥರು, ಅತ್ಯಂತ ಸಮೀಪದ ಬಂಧುಗಳು ಮನಿಯಾರ್ಡರ್ ಕಳಿಸಿದ್ದರು. ಎಷ್ಟು? ಐದು ರೂಪಾಯಿ!

ಎರಡಕ್ಕೂ ಹೋಲಿಸಬಾರದು ಎಂದರೂ ಕೂಡ ಮನಸ್ಸು ಹೋಲಿಸಿತ್ತು. ಮನಿ ಆರ್ಡರ್ ಕೂಪನ್ನಿನಲ್ಲಿ ಗೋವಿಂದರಾಯರ ಒಂದೇ ಒಂದು ಸಾಲು ಹೀಗಿತ್ತು: 'ಇದು ವ್ಯವಹಾರವೂ ಅಲ್ಲ. ಸಾಲವೂ ಅಲ್ಲ. ನಿಮ್ಮ ಗೋವಿಂದರಾವ್.'

ಆನಂತರ ೧೯೬೬ರ ಡಿಸೆಂಬರ್ ೨೧ರಂದು ಊರು ಬಿಟ್ಟೆ. ಹೈದ್ರಾಬಾದ್ ಸೇರಿದೆ. ಮುಂದಿನ ಐದು ವರ್ಷ ಗೋವಿಂದರಾವ್ ಅವರೊಡನೆ ಸಂಪರ್ಕವಾಗಲಿ, ಭೇಟಿಯಾಗಲೀ ಆಗಲೇ ಇಲ್ಲ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಾಶನವಾದ 'ಶ್ರೀ' ಸಂಪುಟದ ಪ್ರತಿಗಳಿಗಾಗಿ ಈ ವೇಳೆಗೆ ಬೆಂಗಳೂರಿನಲ್ಲಿಯೇ ನೆಲೆಗೊಂಡಿದ್ದ ಸಾಹಿತ್ಯ ಭಂಡಾರಕ್ಕೆ ಸಂಪರ್ಕಿಸಿದೆ. ಗೋವಿಂದರಾಯರ ಮಗ ಶ್ರೀ ರಾಜ ಅವರು ಸಂಪುಟದ ಪ್ರತಿಗಳನ್ನು ತಮ್ಮ ಮನೆಯಿಂದಲೇ ತೆಗೆದುಕೊಂಡು ಹೋಗಬಹುದೆಂದು ದೂರವಾಣಿಯಲ್ಲಿ ಹೇಳಿದ್ದರು, ಮನೆಯ ವಿಳಾಸವನ್ನು ಕೊಟ್ಟಿದ್ದರು. ಸಾಹಿತ್ಯ ಭಂಡಾರವನ್ನು ಶ್ರೀ ರಾಜ ಸಂಭಾಳಿಸುತ್ತಿರುವುದು, ಗೋವಿಂದರಾಯರು ವೃದ್ಧಾಪ್ಯದ ಜೊತೆಜೊತೆಗೆ ಸಾಗುತ್ತಿರುವುದು ನನಗೆ ತಿಳಿದೇ ಇರಲಿಲ್ಲ.

ಅವರ ಮನೆಗೆ ಹೋದಾಗ, ಒಳಗಡೆಯಿಂದ ವಯಸ್ಸಾದವರೊಬ್ಬರು ನಿಧಾನವಾಗಿ ಹೊರಗೆ ಬಂದರು. ನೋಡಿದರೆ ೧೯೬೬ರಲ್ಲಿ ನೋಡಿದ್ದ ಗೋವಿಂದರಾಯರು ಎದುರಿಗಿದ್ದರು! ನಾನು ಎದ್ದು ಅವರಿಗೆ ನಮಸ್ಕರಿಸಿದೆ. ವಯೋಮಾನದಿಂದ ನನ್ನಲ್ಲೂ ಸಾಕಷ್ಟು ಬದಲಾವಣೆ ಯಾದ್ದರಿಂದ ಅವರು ನನ್ನನ್ನು ಸಹಜವಾಗಿ ಗುರುತಿಸಲಿಲ್ಲ. ನನ್ನ ಪರಿಚಯ ಮಾಡಿಕೊಂಡು ಅವರು ೧೯೬೬ರಲ್ಲಿ ಕಳುಹಿಸಿದ ೫೦ರೂ ಎಂ.ಓ. ಬಗ್ಗೆ ಪ್ರಸ್ತಾಪಿಸಿದೆ. 'ಎಷ್ಟು ದಿನ ಆದ ಮೇಲೆ ನೋಡ್ತಾ ಇದ್ದೀನಿ. ಮಾತಾಡೋಣ ಅಂದ್ರೆ ಅದೇ ಹಾಳು ಮಾತಾಡ್ತಿಯಲ್ಲ ನೀನು' ಎಂದು ತಲೆ ನೇವರಿಸಿದರು.

ನಾನು ಸಹಜವಾಗಿ ಕೇಳಿದೆ: 'ನೀವು ಬ್ರಹ್ಮಚೈತನ್ಯ ಮಹಾರಾಜರ ಭಕ್ತರಾ?'

ನೇರವಾಗಿ ಉತ್ತರಿಸದೆ ಅವರು ನಗುತ್ತಾ ಹೇಳಿದರು: 'ನಾನು ಬ್ರಹ್ಮನ ಭಕ್ತನೂ ಅಲ್ಲ. ಆದರೆ ನನ್ನ ಚೈತನ್ಯ ಉಡುಗ್ತಾ ಇದೆ.' ಮಾತು ಸಾಹಿತ್ಯದೆಡೆಗೆ, ಭೈರಪ್ಪನವರ ಕೃತಿಗಳ ಬಗ್ಗೆ ಹೊರಳಿತ್ತು. 'ನೀನು ಇನ್ನೂ ಭೈರಪ್ಪನವರನ್ನು ಭೇಟಿಯಾಗಲಿಲ್ವೇನು?' ಎಂದರು.

'ಇನ್ನೂ ಆಗಿಲ್ಲ' ಎಂದೆ.

'ಬಹಳ ಮೊಂಡ ಇದ್ದಿ ಬಿಡು ನೀನು!' ಎಂದರು.

ನಾನು ನಕ್ಕೆ. ನನ್ನ ಈ ಎಲ್ಲ ಮಾತಿನ ಮಧ್ಯೆ ಆ ಎಂ.ಓ. ನನ್ನ ಮನಸ್ಸಿನ ಪಟಲದಿಂದ ಜಾರಿರಲೇ ಇಲ್ಲ.

ಸುಮಾರು ಮುವತ್ತೂರು ವರ್ಷಗಳ ದೀರ್ಘ ಸಂಪರ್ಕದಲ್ಲಿ ಗೋವಿಂದರಾಯರೊಂದಿಗೆ ನಾನು ಅದೆಷ್ಟೋ ವಿಷಯ ಮಾತನಾಡಿದ್ದೇನೆ. ಆದರೆ ನನಗೆ ಸ್ಪಷ್ಟವಾಗಿ ನೆನಪಿರುವ ಒಂದು ವಿಚಾರವೆಂದರೆ, ಅವರ ಸಮಚಿತ್ತ ಪ್ರವೃತ್ತಿ. ಯಾವೊಬ್ಬ ಲೇಖಕನನ್ನು ಅವರು 'ಕಳಪೆ' ಎಂದು ತೆಗಳಲಿಲ್ಲ, ಅಥವಾ ಮಹಾನ್ ಲೇಖಕನ ಗ್ರಂಥವನ್ನು ತಾವು ಪ್ರಕಟಿಸಲಿಲ್ಲ ಎಂಬ ಕೊರಗಾಗಲಿ, ಇಲ್ಲವೇ ಪ್ರಕಾಶಕರಾಗಿ ತಾವೂ ಸಹ ಒಬ್ಬ ಶ್ರೇಷ್ಠ ಬರಹಗಾರರನ್ನು ಸಾಹಿತ್ಯ ಕ್ಷೇತ್ರಕ್ಕೆ ಇತ್ತಿದ್ದೇನೆ ಎಂಬ ಹೆಮ್ಮೆಯಾಗಲೀ ಒಮ್ಮೆಯಾದರೂ ಅವರಲ್ಲಿ ನನಗೆ ಕಾಣಲಿಲ್ಲ.

## ಆತ್ಮೀಯ ನೆನಹುಗಳು

**ಶ್ರೀ ಸಿ.ಕೆ. ಶ್ರೀಕಂಠರಾವ್,** ಬೆಂಗಳೂರು

ಬೆಂಗಳೂರು ವಿಶ್ವೇಶ್ವರಪುರಂನ ಪಿ.ಟಿ.ಐ. ಪ್ರಕಾಶನಗಳ ಪ್ರಚಾರ ಮಾಡುವ ಸಂದರ್ಭದಲ್ಲಿ, ಸುಮಾರು ೧೯೪೦-೬೦ರ ಅವಧಿಯಲ್ಲಿ ನನಗೆ ಶ್ರೀ ಗೋವಿಂದರಾಯರ ಪರಿಚಯವಾಗಿ ಕ್ರಮೇಣ ವ್ಯವಹಾರ ಸಂಬಂಧ ಬೆಳೆದು ಬಂದಿತು. ನಮ್ಮ ಪುಸ್ತಕಗಳನ್ನು ನಿಧಾನವಾಗಿ ನೋಡಿ, ಬೇಕಾದ್ದನ್ನು ಆಯ್ದು ಖರೀದಿಗೆ ತೆಗೆದುಕೊಂಡು ಹಣ ಕೊಡುತ್ತಿದ್ದರು, ಆದರದಿಂದ ಕಳುಹಿಸಿ ಕೊಡುತ್ತಿದ್ದರು. ಅವರು ಬೆಂಗಳೂರಿಗೆ ಬಂದಾಗಲೂ, ನಮ್ಮಲ್ಲಿಗೆ ಬಂದು ಇದೇ ರೀತಿ ನಡೆದುಕೊಳ್ಳುತ್ತಿದ್ದರು. ಈ ಮೂಲಕವಾಗಿ ಅವರು ನನಗೆ ಹೇಗೆ ಕಾಣುತ್ತಾ ಬಂದರೆಂದರೆ: ಅತ್ಯಂತ ಸರಳ ಜೀವಿ, ವಿಶ್ವಾಸಿ, ಮಿತಭಾಷಿ, ಮೃದುಸ್ವಭಾವಿ, ನೇರನಡತೆ ಇಂಥವುಗಳಿಂದ ಕೂಡಿದ ವಿಶೇಷ ವ್ಯಕ್ತಿ ಎಂದು.

ಅವರೇ ಸ್ವಂತ ಪ್ರಕಾಶಪಡಿಸಿದ ಪುಸ್ತಕಗಳನ್ನು ನೋಡಿದಾಗ, ಆ ಪುಸ್ತಕಗಳ ಕರ್ತೃಗಳನ್ನು ಗಮನಿಸಿದಾಗ, ಶ್ರೀ ಗೋವಿಂದರಾಯರ ವ್ಯಕ್ತಿತ್ವ, ಪ್ರಾಮಾಣಿಕತೆಯ ವಿಶೇಷತೆ ಎದ್ದು ಕಂಡು ನನಗೆ ಅವರಲ್ಲಿ ಮೆಚ್ಚುಗೆ, ವಿಶ್ವಾಸ ವೃದ್ಧಿಗೊಳ್ಳುತ್ತಾ ಬಂದಿತು.

**ಶ್ರೀ ನರಸಿಂಹಮೂರ್ತಿ ಮುರ್ತುಗಡ್ಡೆ,** ಧಾರವಾಡ

ಗೋವಿಂದರಾಯರ ನಡವಳಿಕೆಗಳು ವೈಯಕ್ತಿಕ ಜೀವನದಲ್ಲಿ ಆದರ್ಶ ತುಂಬಿಕೊಂಡಿದ್ದವು. ಯಾವುದೇ ಮದುವೆಯ ಆಮಂತ್ರಣ ಅವರ ಕುಟುಂಬಕ್ಕೆ ಬಂದರೆ ಕೇವಲ ಸಂಬಂಧಪಟ್ಟವರನಿಗೆ ಅಥವಾ ವಧುವಿಗೆ ಕಾಣಿಕೆ ಕೊಡುವ ಜಾಯಮಾನ ಅವರದ್ದಾಗಿರಲಿಲ್ಲ. ವಧು ಹಾಗೂ ವರ ಇಬ್ಬರಿಗೂ ಕಾಣಿಕೆಗಳನ್ನು ಕೊಟ್ಟು ಆಶೀರ್ವಾದ ಮಾಡುವ ಸ್ವಭಾವ ಅವರದು. ಕುಟುಂಬದ ಹತ್ತಿರದ ಬಂಧುಗಳು ಕಷ್ಟದಲ್ಲಿದ್ದಾಗ ಆರ್ಥಿಕ ಹಾಗೂ ಇತರೇ ಸಹಾಯಗಳನ್ನು ಮಾಡಿ ಸಂತೃಪ್ತರಾಗುವ ಸ್ವಭಾವ ಅವರಲ್ಲಿತ್ತು. ಅವರು ಕಟ್ಟಿ ಬೆಳೆಸಿದ ಪ್ರಕಾಶನ ಸಂಸ್ಥೆ ಇಂದಿಗೂ ಅವರ ಮಾರ್ಗದರ್ಶನದಂತೆಯೇ ನಡೆಯುತ್ತಿರುವುದು ಹೆಮ್ಮೆ ಪಡುವ ವಿಷಯವಾಗಿದೆ.

**ಶ್ರೀಮತಿ ಹೇಮಲತಾ ಪರಶುರಾಮ್,** ಹೈದರಾಬಾದ್

ಕೆಲವು ದಶಕಗಳ ಹಿಂದೆ ನಾನು 'ಗೃಹಿಣಿ' ಎಂಬ ಕೃತಿಯೊಂದನ್ನು ಬರೆದು ಪ್ರಕಟಿಸಲು ಯೋಚಿಸಿದೆ. ಆಗ ಶ್ರೀಮತಿ ಶಾಂತಾ ದಿವಾಕರರು 'ಸಂಯುಕ್ತ ಕರ್ನಾಟಕ' ಪತ್ರಿಕೆಯಲ್ಲಿ

'ಮಹಿಳಾ ವಿಭಾಗ' ನೋಡಿಕೊಳ್ಳುತ್ತಿದ್ದರು. ಅವರಿಗೆ ನನ್ನ ಕರಡು ಪ್ರತಿ ತೋರಿಸಿದೆ. ತಕ್ಷಣ 'ನಮ್ಮ ಮುದ್ರಣಾಲಯದಲ್ಲಿಯೇ ಮುದ್ರಣ ಮಾಡಿಸಿ' ಎಂದರು. 'ನನ್ನಲ್ಲಿ ಹಣವಿಲ್ಲ' ಎಂದರೂ ಮುದ್ರಣ ಮಾಡಿಸಲು ಒತ್ತಾಯದಿಂದ ಆದೇಶವಿತ್ತರು.

ಇದೇ ಅಚ್ಚುಕೂಟದಲ್ಲಿ ಮ. ಗೋವಿಂದರಾಯರು ಎಸ್.ಎಲ್. ಭೈರಪ್ಪನವರ ಕಾದಂಬರಿಯೊಂದನ್ನು ಅಚ್ಚು ಹಾಕಿಸುತ್ತಿದ್ದರು. ಒಮ್ಮೆ ನನ್ನ ಪುಸ್ತಕದ ಅಚ್ಚಾದ ಕೆಲವು ಹಾಳೆಗಳನ್ನು ನೋಡಿ ತಾವೇ ಪುಸ್ತಕದ ಮಾರಾಟ ಕೈಗೊಳ್ಳುವುದಾಗಿ ಹೇಳಿದರು. ಆಗ ನನಗೆ ಸುಡುತ್ತಿರುವ ಒಡಲಿಗೆ ಹಾಲೆರೆದಂತಾಗಿತ್ತು. ಇದಕ್ಕೂ ಮೊದಲು ನನಗೂ ಅವರಿಗೂ ಪರಿಚಯವಿರಲಿಲ್ಲ. ನಾನು ಹೊರನಾಡಿನ ಹೊಸ ಲೇಖಕಿಯಾಗಿದ್ದೆ. ಆದರೂ ಅವರು ನನ್ನನ್ನು ಗುರುತಿಸಿದ್ದರು. ಇದಕ್ಕಾಗಿ ನಾನು ಅವರಿಗೆ ತುಂಬಾ ಋಣಿಯಾಗಿದ್ದೇನೆ. ಅವರು ವ್ಯವಹಾರದಲ್ಲಿ ಸ್ಫಟಿಕದಂತಿದ್ದರು. ಮೂರು ಸಾವಿರ ಪ್ರತಿ ಮುದ್ರಿಸಿ ಎರಡು ಸಾವಿರ ಪ್ರತಿಗಳ ಗೌರವಧನವನ್ನು ಲೇಖಕರಿಗೆ ಕೊಡುವಂಥವರಾಗಿರಲಿಲ್ಲ ಅವರು. ವರ್ಷಾನುಗಟ್ಟಲೆ ಹಸ್ತಪ್ರತಿ ಇಟ್ಟುಕೊಂಡು ಬರಹಗಾರರನ್ನು ಸತಾಯಿಸುತ್ತಾ ಸ್ವಪ್ರಯೋಜನಕ್ಕಾಗಿ ಅವರು ಎಂದೂ ಬಳಸಿಕೊಳ್ಳಲಿಲ್ಲ. ನನ್ನಂಥವಳಿಗೂ ವ್ಯಕ್ತಿತ್ವವೊಂದನ್ನು ತಂದುಕೊಟ್ಟು ನನ್ನ ಜೀವನ ಗತಿಯನ್ನೇ ಅವರು ಬೇರೆ ಮಾಡಿದರು.

**ಶ್ರೀ ಬಿ.ಆರ್. ವಾಡಪ್ಪಿ,** ಧಾರವಾಡ

ನನ್ನ 'ತಾರಕಂಬಗಳು' ಲಲಿತಪ್ರಬಂಧ ಸಂಕಲವನ್ನು ಹುಬ್ಬಳ್ಳಿಯ ಸಾಹಿತ್ಯ ಭಂಡಾರದ ಮಾಲೀಕರೇ ಹೊರತಂದರು. ಮುಂದೆ ಅದು ಕರ್ನಾಟಕ ವಿಶ್ವವಿದ್ಯಾಲಯದ ಬಿ.ಎ.ಗೆ ಪಠ್ಯವಾಯಿತು. ನಾನು ಕೇಳಿದಂತೆ ಮಂ. ಗೋವಿಂದರಾಯರಂತಹ ಪ್ರಕಾಶಕರು ಸಿಕ್ಕುವುದು ಕಠಿಣ. ಕರ್ನಾಟಕದಲ್ಲಿ ಗ್ರಂಥ ಪ್ರಕಾಶನದ ಕೆಲಸ ಅಷ್ಟೇನೂ ಸುಲಭವಲ್ಲ. ಇದು ನನ್ನ ಅನುಭವ. ಪ್ರಕಾಶಕರನ್ನು ಗ್ರಂಥಕರ್ತರು, ಗ್ರಂಥಕರ್ತರನ್ನು ಪ್ರಕಾಶಕರು ನಂಬಿ ಕೆಲಸ ಮಾಡುವುದು ಒಂದು ದೊಡ್ಡ ಸಮಸ್ಯೆಯಾಗಿರುವಾಗ–ಗೋವಿಂದರಾಯರು ತಮ್ಮ ಪ್ರಾಮಾಣಿಕತೆಯಿಂದ ಹೆಸರು ಪಡೆದದ್ದು ಒಂದು ದೊಡ್ಡ ಮಾತೇ ಸರಿ. ದಿ॥ ದ.ಬಾ. ಕುಲಕರ್ಣಿಯವರನ್ನೂ ಈ ಸಂದರ್ಭದಲ್ಲಿ ನಾನು ನೆನೆಯುತ್ತೇನೆ. ಅವರು ಗ್ರಂಥೋದ್ಯಮದಲ್ಲಿ ಬಹಳಷ್ಟು ಕಷ್ಟಪಟ್ಟರೂ ಒಳ್ಳೇ ಸ್ನೇಹಜೀವಿಗಳಾಗಿದ್ದರೆಂಬುದನ್ನು ನಾನು ಇಂದಿಗೂ ಸ್ಮರಿಸಿಕೊಳ್ಳುತ್ತೇನೆ.

ಒಬ್ಬ ಹಿರಿಯ ಪ್ರಾಮಾಣಿಕ ಪುಸ್ತಕೋದ್ಯಮಿಯ ಬಗ್ಗೆ ಒಂದು ಸ್ಮೃತಿಹೊತ್ತಿಗೆ ಹೊರಬರುತ್ತಿರುವುದು ಇದೇ ಮೊದಲು ಎಂದು ನನ್ನ ಭಾವನೆ.

# ಆತ್ಮೀಯ ನೆನಹುಗಳು

**ಶ್ರೀಮತಿ ಪ್ರೇಮಾಭಟ್,** ಬೆಂಗಳೂರು

ನಾನೇನೂ 'ಸಾಹಿತ್ಯ ಭಂಡಾರದ ಗೋವಿಂದರಾವ್ ಅವರನ್ನು ಹತ್ತಿರದಿಂದ ಕಂಡವಳಲ್ಲ. ಅವರ ಕುಟುಂಬದ ಸಂಪರ್ಕವೂ ನನಗಿಲ್ಲ. ಆದರೆ ಅವರೊಬ್ಬ ಪ್ರಕಾಶಕರೆಂಬ ಪರಿಚಯ ನನಗಿದೆ. ಪ್ರಕಾಶಕರು, ಓದುಗರು ಇಲ್ಲದಿದ್ದರೆ ಸಾಹಿತಿ ಇಲ್ಲ. ಸಾಹಿತಿಗಳನ್ನು ಓದುಗರಿಗೆ ಪರಿಚಯಿಸಿ ಕೊಡುವವನು ಪ್ರಕಾಶಕ. ಅವನು ತಳಪಾಯವಾದರೆ ಸಾಹಿತಿ ಗೋಡೆಯಾಗಿ ನಿಲ್ಲುತ್ತಾನೆ, ಭದ್ರವಾಗಿ ಸಾಹಿತ್ಯಪ್ರಪಂಚದಲ್ಲಿ ತಳವೂರುತ್ತಾನೆ.

ಪುಸ್ತಕ ಪ್ರಕಾಶನ ಸುಲಭ ಸಾಧ್ಯವಾದ ಮಾಧ್ಯಮವೇನೂ ಅಲ್ಲ. ಪುಸ್ತಕ ಪ್ರಕಾಶನ ಮಾಡಿ ದುಡ್ಡು ಮಾಡುವವರಿಗಿಂತ ಹೆಚ್ಚಾಗಿ ದುಡ್ಡು ಕಳಕೊಂಡಿರುವವರೇ ಹೆಚ್ಚು. ತುಳುಭಾಷೆಯಲ್ಲಿ ಒಂದು ಗಾದೆ ಮಾತಿದೆ; 'ಒರಳ ತಪುಡ ಇರ್ದಳ ಇಪುಡ' (ಒಂದು ಸೇರು ತಪ್ಪದು ಎರಡು ಸೇರು ಇರದು) ಎಂದು. ಪ್ರಾಮಾಣಿಕ ಪ್ರಕಾಶಕರಾದವರ ಪಾಡು ಇಷ್ಟೆ. ಹಾಕಿದ ಹಣ ಲುಕ್ಸಾನ್ ಆಗದಿದ್ದರೆ ಪ್ರಕಾಶಕನ ಪುಣ್ಯ. ಲಾಭ ಒತ್ತಟ್ಟಿಗಿರಲಿ ಹಾಕಿದ ಹಣ ದಕ್ಕುವುದಿಲ್ಲ. ಅಂತಹ ಪರಿಸ್ಥಿತಿ ಪ್ರಕಾಶಕರದ್ದು. ಇದಕ್ಕೆ ಕಾರಣ ಕೊಂಡು ಓದುವ ವಿಚಾರದಲ್ಲಿ ನಮ್ಮ ಓದುಗರು ಹಿಂದೆ ಬೀಳುತ್ತಿರುವುದು. ಎಲ್ಲೋ ಒಬ್ಬರು ಒಂದು ಪುಸ್ತಕ ಖರೀದಿಸಿದರೆ, ಅದನ್ನು ಕೈಯಿಂದ ಕೈಗೆ ಪಡೆದು ಇಪ್ಪತ್ತು ಮಂದಿ ಓದಿ ಮುಗಿಸಿಬಿಡುತ್ತಾರೆ. ಇನ್ನು ಧೈರ್ಯವಾಗಿ ಪುಸ್ತಕ ಪ್ರಕಾಶನಕ್ಕೆ ಇಳಿಯುವವರು ಒಂದಿಷ್ಟು ಕನ್ನಡದ ಕೆಲಸ ಆದರೆ ಆಗಲಿ ಎಂದು ತ್ಯಾಗಬುದ್ಧಿ ಇಟ್ಟುಕೊಂಡು ಪುಸ್ತಕ ಪ್ರಕಾಶನಕ್ಕೆ ಇಳಿಯುವುದು ಮಾತ್ರ ಅಪರೂಪ. ಅಂತಹವರಲ್ಲಿ ಒಬ್ಬರು ಮಾನ್ಯ ಶ್ರೀ ಗೋವಿಂದರಾವ್ ಅವರು. ನನ್ನ ದೃಷ್ಟಿಯಲ್ಲಿ ಅವರು ಎತ್ತರದ ವ್ಯಕ್ತಿಗಳು.

**ಶ್ರೀ ಜಿ.ಎನ್. ಅಶೋಕವರ್ಧನ,** ಮಂಗಳೂರು

ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಆರ್ಥಿಕ ಬಂಡವಾಳ ಏನೂ ಇಲ್ಲದೆ ಪ್ರಕಾಶಕ, ವಿತರಕರ ವಿಶ್ವಾಸವನ್ನಷ್ಟೇ ಬಂಡವಾಳವಾಗಿ ನೆಚ್ಚಿ ಪುಸ್ತಕ ಮಾರಾಟಕ್ಕಿಳಿದವನು ನಾನು. ಮೊದಮೊದಲು ಕೆಲವೇ ಸಗಟು ವಿತರಕರಿಂದ ನನ್ನ ಪುಸ್ತಕಗಳ ಅಗತ್ಯಗಳನ್ನು ಪೂರೈಸಿಕೊಂಡೆ. ಮುಂದೆ ನೇರವಾಗಿ ಬೇರೆ ಬೇರೆ ಪ್ರಕಾಶಕರುಗಳನ್ನು ಸಂಪರ್ಕಿಸಲು ಪ್ರಯತ್ನಿಸಿದಂತೆಯೇ ಬೆಂಗಳೂರಿನ 'ಸಾಹಿತ್ಯ ಭಂಡಾರ'ಕ್ಕೂ ಬರೆದುಕೊಂಡೆ. ಮಾರಾಟವಾದಂತೆ ಪಾವತಿ ಕೊಡುವ ಭರವಸೆಯ ಮೇಲೆ ಪುಸ್ತಕಗಳ ಸಾಲ ಕೇಳಿದ್ದೆ. ಮರು ಟಪಾಲಿನಲ್ಲೇ ಶ್ರೀ ಗೋವಿಂದರಾಯರ

ಉತ್ತರ ಹಾಗೂ ಪುಸ್ತಕಗಳ ಕಟ್ಟು ಬಂದವು. ನನ್ನ ಬಗ್ಗೆ ಶ್ರೀ ಕೆ.ವಿ. ಸುಬ್ಬಣ್ಣ ಹೇಳಿದ್ದ ಒಳ್ಳೇ ಮಾತನ್ನು ಸ್ಮರಿಸಿಕೊಂಡು ಅ-ಮಿತ, ಅ-ನಿಯತ ಸಾಲದ ಖಾತೆ ಕೊಟ್ಟಿದ್ದರು. ಮುಂದೆ ನಾನೇ ಸ್ವಯಂಪೂರ್ಣವಾಗಿ 'ಇನ್ನು ಸಾಲ ಬೇಡ' ಎನ್ನುವವರೆಗೂ ಎಂದೂ ತಡವರಿಸದ ಬಂಧವಾಗಿ ಇದು ನಡೆದೂ ಬಂತು. ಅದೇ ಒಳ್ಳೆಯತನ ಅವರ ಮಕ್ಕಳ ಕಾಲದಲ್ಲೂ ಮುಂದುವರಿದಿರುವುದು ವೈಯಕ್ತಿಕವಾಗಿ ನನ್ನ ಮತ್ತು ಪುಸ್ತಕ ಪ್ರಪಂಚದ ಭಾಗ್ಯವಾಗಿದೆ. ಶ್ರೀ ಗೋವಿಂದರಾಯರೊಡನೆ ವ್ಯವಹಾರದಲ್ಲಿ ನನಗೆಂದೂ ಗೊಂದಲ ಮೂಡಲಿಲ್ಲ. ಇಂದು ಅದೇ ನನಗೊಂದು ಕೊರತೆಯಾಗಿ ಕಾಣುತ್ತಿದೆ. ಬೇಡಿಕೆ, ಬಿಲ್ಲು, ರಸೀದಿಗಳಿಂದ ಹೊರಗೆ ರಾಯರನ್ನು ಭೇಟಿಯಾಗುವ, ಮಾತಾಡುವ, ಕನಿಷ್ಠ ಪತ್ರವ್ಯವಹಾರ ನಡೆಸುವ ಅವಕಾಶವೇ ನನಗೊದಗಲಿಲ್ಲ.

**ಶ್ರೀ ಶ್ರೀನಿವಾಸ ಹಾವನೂರ,** ಬೆಂಗಳೂರು

ಈಗ ೧೦-೧೫ ವರ್ಷಗಳ ಹಿಂದೆ ನಾನು ಹೊರನಾಡಿನಲ್ಲಿದ್ದಾಗ ಉದ್ದರಿ ಲೆಕ್ಕದಲ್ಲಿ ಸಾಹಿತ್ಯ ಭಂಡಾರದಿಂದ ಪುಸ್ತಕಗಳನ್ನು ಒಯ್ಯುತ್ತಿದ್ದೆ. ಆಗೆಲ್ಲ ಅಂಗಡಿಯಲ್ಲಿ ಅವರ ಮಗ ರಾಜಾ ಇರುತ್ತಿದ್ದರು. ಹುಬ್ಬಳ್ಳಿಯ ಕಾಲದಿಂದಲೂ ಹಳೆಯ ಗುರುತು, ಹೀಗಾಗಿ ಲೆಕ್ಕ ಬರೆಸಿ ಪುಸ್ತಕ ಒಯ್ಯುತ್ತಿದ್ದೆ. ಹಣ ಕೊಡುವಲ್ಲಿ ನಾನು, 'ನಡೀತದೆ, ಆಮೇಲೆ ಕೊಟ್ಟರಾಯಿತು' ಎಂದುಕೊಂಡು ಮುಂದೂಡುತ್ತಿದ್ದೆ.

ಒಮ್ಮೆ ಅಂಗಡಿಯಲ್ಲಿ ಗೋವಿಂದರಾಯರೇ ಇದ್ದರು. ನನಗೆ ಬೇಕಿದ್ದ ಪುಸ್ತಕ ಖರೀದಿಸಿ ಹೊರಟು ನಿಂತಾಗ ರಾಯರು, 'ನಿಮ್ಮಿಂದ ಹಣ ಬಾಕಿ ಇದೆಯಲ್ಲ? ನಾನು ಸಮೀಪದಲ್ಲಿ ಲೆಕ್ಕ ಪತ್ರ ನೋಡಿರಲಿಲ್ಲ' ಎಂದರು. ನಾನು 'ಹೌದು. ಎಷ್ಟು ಇದೆ?' ಎಂದು ವಿಚಾರಿಸಿದೆ. ಆ ಅಂಕಿ ಒಂದು ಸಾವಿರವನ್ನು ದಾಟಿಬಿಟ್ಟಿದ್ದಿತು. ಆಗ ನಾನು ತಪ್ಪಿತಸ್ಥನ ಭಾವನೆಯಿಂದ 'ವೆರಿ ಸಾರಿ, ಮುಂದಿನ ಸಲ ಕೊಡುವೆ' ಎಂದು ಹೇಳಿದೆ. 'ಇಲ್ಲ, ಇಲ್ಲ ತಪ್ಪು ನಮ್ಮದು. ಇಷ್ಟರವರೆಗೆ ಖಾತೆ ಬೆಳೆಯುವ ಮುಂಚೆ ನಿಮಗೆ ನಾನು ರಿಮೈಂಡರ್ ಕಳಿಸಬೇಕಿತ್ತು. ಯಾರಿಗೇ ಆಗಲಿ, ಅಷ್ಟು ದೊಡ್ಡ ಮೊತ್ತವನ್ನು ಕೊಡುವುದು ಕಷ್ಟವೇ. ನನ್ನ ಅನಾರೋಗ್ಯದಿಂದಾಗಿ ನಿಮಗೆ ಪತ್ರ ಬರೆಯುವುದು ಉಳಿದುಬಿಟ್ಟಿತಲ್ಲ ಎಂದು ನನಗೇ ಬೇಸರ. ನೀವು ಒಮ್ಮೆಲೆ ಕೊಡುವುದನ್ನು ಇಟ್ಟುಕೊಳ್ಳಬೇಡಿರಿ. ನಿಧಾನವಾಗಿ ಕೊಟ್ಟೇರಂತೆ' ಎಂದರು.

ಅವರ ಮಾತಿನ ಉದ್ದಕ್ಕೂ, ನಾನು ಹಣ ಬಾಕಿ ಇಟ್ಟುಕೊಂಡದ್ದು ಗಮನದಲ್ಲಿರದೇ, ತಮ್ಮಿಂದ ಒಂದು ಲೋಪವಾಗಿದೆಯೆಂಬುದೇ, ಎದ್ದು ಕಾಣುತ್ತಿತ್ತು.

**ಶ್ರೀ ಶಂಕರ ಮೊಕಾಶಿ ಪುಣೇಕರ,** ಧಾರವಾಡ

ಸುಮಾರು ೧೯೬೪ರ ಫೆಬ್ರುವರಿ ತಿಂಗಳು ಇರಬಹುದು. ಸಾಹಿತ್ಯ ಅಕ್ಯಾಡೆಮಿಯ ವತಿಯಿಂದ ಕಾವ್ಯ ಸಂಜೆಗಳು ಎನ್ನುವ ಸಮ್ಮೇಳನಕ್ಕೆ ನನ್ನನ್ನು ಭಾರತದ ಕಾವ್ಯ ಪ್ರತಿನಿಧಿ ಎಂದು ಕಳಿಸಬೇಕೆನ್ನುವ ನಿರ್ಣಯ ತೆಗೆದುಕೊಂಡಿದ್ದರು. ಅದರ ಬಗ್ಗೆ ಏನೇನೂ ಮಾಹಿತಿ ಇದ್ದಿಲ್ಲ. ಕೆಲವು ಮಿತ್ರರು ನನ್ನನ್ನು ಕಂಡು ವಿದೇಶ ಪ್ರಯಾಣದ ತಯ್ಯಾರಿಯಲ್ಲಿ ಇರಬೇಕೆಂದು ಸೂಚಿಸಿದ್ದರು. ಪ್ರತ್ಯಕ್ಷ ಪತ್ರ ಬಂದಾಗ ಯುಗೋಸ್ಲಾವಿಯಾದ ಜೊತೆಗೆ ಬಲ್ಗೇರಿಯಾ-ಹಂಗರಿಗಳ ಪ್ರಯಾಣ ಮಾಡಬೇಕೆಂದು ಗೊತ್ತಾಯಿತು. ಅಷ್ಟು ಮುಂದೆ ಹೋದಮೇಲೆ ಇಂಗ್ಲಂಡಿಗೆ ಯಾಕೆ ಹೋಗಬಾರದೆಂದು ಆಸೆಯಾಯಿತು. ಬ್ರಿಟಿಷ್ ಕೌನ್ಸಿಲ್ಲಿಗೆ ಪತ್ರ ಬರೆದಾಗ, ಅವರೂ ಒಪ್ಪಿಕೊಂಡರು. ಹಂಗರಿಯಿಂದ ಲಂಡನ್ ಮುಟ್ಟಲು ಸುಮಾರು ಐದು ಸಾವಿರ ರೂಪಾಯಿಯಾಗಬಹುದೆಂದು ಅಂದಾಜು. ಈ ಹಣ ನಮ್ಮ ಕೈಯಿಂದಲೇ ಕೊಡಬೇಕು. ಇದೇ ಚಿಂತೆಯಲ್ಲಿ ಇರುವಾಗ ದೇವರು ಬಂದಂತೆ ಒಬ್ಬ ಹಣ್ಣುಹಣ್ಣು ಮುದುಕರು ನಮ್ಮ ಮನೆಗೆ ಬಂದು ಪಣಕಿ ಹಾಕಿದರು. ಇವರೇ ಎಂ. ಗೋವಿಂದರಾಯರು. 'ಸಾಹಿತ್ಯ ಭಂಡಾರ'ದ ಮಾಲೀಕರು. 'ಸುಧಾ' ಪತ್ರಿಕೆಯ ಸ್ಪರ್ಧೆಯಲ್ಲಿ ನನ್ನ 'ನಟನಾರಾಯಣಿ'ಗೆ ಪ್ರಥಮ ಬಹುಮಾನ ೧೯೬೮ರಲ್ಲಿ ಪ್ರಕಟವಾಗಿ, ೧೯೬೨ರಲ್ಲಿ ಧಾರಾವಾಹಿಯಾಗಿ ಮುದ್ರಣಗೊಂಡಿತ್ತು. ಅದನ್ನೇ ಪುಸ್ತಕ ರೂಪವಾಗಿ ಪ್ರಕಟಿಸಿ ನನಗೆ ಮುಂಗಡ ರಾಯಲ್ಟಿಯಾಗಿ ೩೦೦೦ ರೂಪಾಯಿ ಕೊಡಬೇಕೆಂದು ಕೇಳಿಕೊಂಡೆ. ಅವರು ಸಂತೋಷದಿಂದ ಒಪ್ಪಿಕೊಂಡರು. ಆದರೆ ಅದೇ ಆಗ 'ಸುಧಾ'ದಲ್ಲಿ ಪ್ರಕಟಗೊಂಡಿದ್ದರಿಂದ ಅದರ ಪುಸ್ತಕರೂಪಕ್ಕೆ ಮುಕ್ಕಾಲುಪಾಲು ಮಾರ್ಕೆಟ್ ಕುಸಿದಿದೆಯೆಂದು ತಮ್ಮ ತೊಂದರೆ ತೋಡಿಕೊಂಡರು. ಮುಂದಿನ ಎರಡು ದಿನಗಳಲ್ಲಿ ೩೦೦೦ ರೂಪಾಯಿ ಪೋಸ್ಟಿನಿಂದ ನನಗೆ ತಲುಪಿತು. ನನ್ನ ದಾರಿ ಸುಗಮಗೊಂಡಿತು. ನಾನು ಮರಳಿಬಂದಮೇಲೆ ಅವರ ಮಕ್ಕಳು ಅದರ ಮುದ್ರಣಕ್ಕಾಗಿ ನೀಡಿದ ಮುಂಗಡ ರಾಯಲ್ಟಿಯನ್ನು ಮರಳಿ ಪಡೆದು ಮುದ್ರಣ ಕಾರ್ಯ ಮುಂದುವರಿಸಿದರು. ಈ ಉಪಕಾರ-ಔದಾರ್ಯಗಳನ್ನು ನಾನು ಎಂದೆಂದೂ ಮರೆಯಲಾರೆ. ನನ್ನ ಅಜ್ಜ ದಿ|| ರಾಮರಾವ ಪುಣೇಕರರ ಪರಿಚಯ ದಿ|| ಗೋವಿಂದರಾಯರಿಗೆ ಇತ್ತು. ತಮ್ಮ ಬಡತನದ ದಿನಗಳನ್ನೆಲ್ಲಾ ನೆನಸಿಕೊಂಡರು.

ಗೋವಿಂದರಾಯರಿಗೆ ಭೈರಪ್ಪನವರು ನನ್ನ ಬಗ್ಗೆ ಪರಿಚಯ ಮಾಡಿರಬಹುದು. ನಂತರ ಹಲವುಬಾರಿ ಅವರ ಮನೆಗೂ ಹೋಗಿ ಬಂದೆ. ಅವರ ಪ್ರೀತಿ ವಿಶ್ವಾಸಗಳು ನನ್ನನ್ನು ಸಾಹಿತ್ಯ ಕ್ಷೇತ್ರದಲ್ಲಿ ಮುಂದುವರಿಯಲು ಕಾರಣಕರ್ತರಾದ ಹಲವಾರು ಮಹನೀಯರಲ್ಲಿ ಪರಿಗಣಿಸುತ್ತೇನೆ.

**ಎನ್.ಸಿ. ದೇಸಾಯಿ,** ಹುಬ್ಬಳ್ಳಿ

ಕ್ರಿ.ಶ. ೧೯೪೮ರಲ್ಲಿ ನಾನು ಕೆಲದಿನಮಟ್ಟಿಗೆ ಎಂದು ಮುಂಬಯಿಗೆ ಹೋದವನು ಅಲ್ಲಿಯೇ ಸ್ಥಾಯಿಯಾಗಿಬಿಟ್ಟೆ. ಆ ಮೊದಲು ಹುಬ್ಬಳ್ಳಿ ಧಾರವಾಡಗಳ ಕೆಲ ಪ್ರಕಾಶಕರಿಗಾಗಿ

ಪುಸ್ತಕ, ಮಾಸಪತ್ರಿಕೆ, ವಾರಪತ್ರಿಕೆಗಳಿಗೆ ಮುಖಚಿತ್ರಗಳನ್ನು ಬಿಡಿಸಿದ್ದುಂಟು. ಮುಂಬೈಗೆ ಹೋದ ಮೇಲೂ ಚಿತ್ರಗಳಿಗಾಗಿ ಅಲ್ಪಸ್ವಲ್ಪ ಬೇಡಿಕೆ ಬರುತ್ತಿತ್ತು.

ಒಮ್ಮೆ ರಜೆಯ ಮೇಲೆ ಊರಿಗೆ ಬಂದಾಗ ಹಳ್ಳಿಯಿಂದ ಹುಬ್ಬಳ್ಳಿಗೆ ಬಂದು ಮತ್ತೆ ಊರಿಗೆ ಮರಳಬೇಕು. ಆಗ ಇಂದಿನಷ್ಟು ಬಸ್ಸಿನ ಸೌಕರ್ಯವಿರಲಿಲ್ಲ. ಹೆಚ್ಚಾಗಿ ರೈಲಿನಲ್ಲೇ ಓಡಾಟ. ಊರಿಗೆ ಮರಳುತ್ತಿದ್ದೆ. ಗದ್ದಲವೂ ಅಷ್ಟಿರಲಿಲ್ಲ. ನಾನು ಪ್ರವಾಸಿಸುತ್ತಿದ್ದ ಬೋಗಿಯಲ್ಲೇ ಶ್ರೀ ಮ. ಗೋವಿಂದರಾಯರೂ ಇದ್ದರು. ಅಹುದು ಅವರು ಸಾಹಿತ್ಯ ಭಂಡಾರದ ಗೋವಿಂದ ರಾಯರು ಎಂದು ನನಗೆ ಚನ್ನಾಗಿ ಗೊತ್ತು. ಆದರೆ ಅವರನ್ನು ಮಾತಾಡಿಸಹೋಗಲಿಲ್ಲ. ಅವರು ಏನನ್ನೋ ಓದುತ್ತಾ ಖಿಡಕಿಯ ಬದಿಯ ಆಸನದಲ್ಲಿ ಕುಳಿತಿದ್ದರು.

ಪ್ರಕಾಶಕರು, ಬರಹಗಾರರು ಎಂದಲ್ಲದೇ ಅವರ ಬಗ್ಗೆ ನನಗೆ ಇನ್ನೊಂದು ಅಭಿಮಾನ ವಿತ್ತು; ನಮ್ಮೂರಿನ (ಅಗಡಿ) ಹೇಜೀಬರಾಮರಾಯರ ಸ್ನೇಹಿತರಾಗಿದ್ದರು ಗೋವಿಂದ ರಾಯರು. ರಾಮರಾಯರು ಕಾಲೇಜಿನ ಮೆಟ್ಟಿಲು ಹತ್ತಿದ ನಮ್ಮ ಹಳ್ಳಿಯ ಪ್ರಥಮಿಗರೂ ಅಹುದು, ಪ್ರಥಮ ಪದವೀಧರರೂ ಅವರೇ ಆಗಿದ್ದರು.

ಅವರಿಗೆ ದೇಶಾಭಿಮಾನವಲ್ಲದೇ ಸಾಹಿತ್ಯದ ಅಭಿರುಚಿಯೂ ಇತ್ತು. ಇವೇ ಗೋವಿಂದ ರಾಯರ ಸ್ನೇಹಕ್ಕೆ ಕಾರಣವಾಗಿರಲೂಬಹುದು. ನನಗೆ ಮಸಕು ಮಸಕಾಗಿ ನೆನಪಿದ್ದ ಮಟ್ಟಿಗೆ– ಹೇಜೀಬರು ಮತ್ತು ಕೆಲ ಸ್ನೇಹಿತರು ಸೇರಿ, 'ಹೆತ್ತುಪ್ಪ ಕರಿಗಡಬು' ಎಂಬ ಹೆಸರಿನಲ್ಲಿ ಕಾವ್ಯ ಪ್ರಕಾಶನ ಮಾಡುತ್ತಿದ್ದರೆಂದು ಕಾಣುತ್ತದೆ. ಅಂಥ ಕೆಲ ಚಿಕ್ಕ ಹೊತ್ತಿಗೆಗಳನ್ನು ನೋಡಿದ ನೆನಪಲ್ಲದೇ ಹೇಜೀಬರು ಬರೆದ 'ಜೈ ಜೈ ಜಗವಿನುತೆ ಭೂ ಮಾತೆ ಭುವನಾನಂದಿತ ಭಾರತಿಯೇ ಜೈ ಜೈ...' ಎಂಬ ಪದಗಳ ಸಾಲೂ ನೆನಪಿದೆ. ಬಹುಶಃ ಈ ಗುಂಪಿನಲ್ಲಿ ಗೋವಿಂದರಾಯರು ಇದ್ದಿರಬೇಕು ಎಂದು ನನ್ನ ಸಂದೇಹ. ಕಾರಣ ಹೇಜೀಬರ ಓಡಾಟ ಮತ್ತು ಒಡನಾಟ ಹೆಚ್ಚಾಗಿ ಸಾಹಿತ್ಯ ಭಂಡಾರದಲ್ಲಿಯೇ.

ರೈಲು ಓಡುತ್ತಲೇ ಇತ್ತು. ಬಹುಶಃ ನಾನೇ ಮಾತಿಗೆ ಪ್ರಾರಂಭಿಸಿದೆನೆಂದು ಕಾಣುತ್ತದೆ. ಅವರೇ ಗೋವಿಂದರಾಯರು ಎಂದು ಖಚಿತವಾಗಿ ಗೊತ್ತಿದ್ದರೂ ಔಪಚಾರಿಕವಾಗಿ, 'ನೀವು ಸಾಹಿತ್ಯ ಭಂಡಾರದವರಲ್ಲವೇ?' ಎಂದು ಕೇಳಿದೆ. ಹೌದು ಎಂದು ಉತ್ತರಿಸಿ ಮತ್ತೆ ಓದಿನಲ್ಲಿಯೇ ಮಗ್ನರಾದರು. ಕೆಲ ನಿಮಿಷಗಳು ಕಳೆದಿರಬೇಕು. ಅವರು ಕೇಳಿದರು, 'ಹಾವೇರಿ ತಲುಪಲು ಎಷ್ಟು ಸಮಯವಾದೀತು? 'ಸಾಮಾನ್ಯವಾಗಿ ಹುಬ್ಬಳ್ಳಿಯಿಂದ ಎರಡು ಗಂಟೆಗಳ ಕಾಲ ಬೇಕು' ಎಂದು ಉತ್ತರಿಸುತ್ತಾ, 'ಹಾವೇರಿಗೆ ಹೊರಟಿದ್ದೀರಾ?' ಎಂದು ನಾನೇ ಪ್ರಶ್ನಿಸಿದೆ.

'ಇಲ್ಲ ಹಾವೇರಿಯಿಂದ ಮುಂದೆ ಅಗಡಿಯೆಂಬ ಹಳ್ಳಿಯಿದೆ. ಅಲ್ಲಿಗೆ ಹೋಗಿ ಇವತ್ತೇ ಮರಳಬೇಕು' ಎಂದರು. ಅವರು ಅಗಡಿಗೆ ಹೊರಟಿದ್ದಾರೆಂದು ತಿಳಿದು ಆಶ್ಚರ್ಯವಾಯಿತು ನನಗೆ. ಅನುಮಾನದಿಂದ 'ಏನು? ಹೇಜೀಬರ ಬಳಗದವರನ್ನು ಕಾಣಲೋ, ಆನಂದವನದ ಸಾಧು ಶೇಷಾಚಲರ ದರ್ಶನಕ್ಕೋ' ಎಂದು ಅನುಮಾನದಿಂದ ಕೇಳಿದೆ.

ಗೋವಿಂದರಾಯರು, 'ಇಲ್ಲ ಇನ್ನೂ ಒಂದು ಕೆಲಸವಿದೆ' ಎಂದೆನ್ನುತ್ತ, 'ಮುಂಬೈ ಯಿಂದ ಎನ್.ಸಿ. ದೇಸಾಯರು ಬಂದಾರಂತ. ಅವರನ್ನ ನೋಡಲಿಕ್ಕೆ ಹೊಂಟೇನಿ... ಚಿತ್ರ

ತೆಗೆಸೂದದ...' ಎಂದರು.

ಇದನ್ನು ಕೇಳಿ ನನಗೇನಾಗಿರಬೇಡ, ಏನನಿಸಿರಬೇಡ ಹೇಳಿ? ಏನು ಉತ್ತರಿಸಬೇಕೋ ತಿಳಿಯದಾಯಿತು. ಮನ ಬಹಳಷ್ಟು ಸಂಕುಚಿತವಾಯಿತು. ಆದರೆ ಉತ್ತರಿಸಬೇಕಲ್ಲ? ವಾಸ್ತವಕ್ಕೆ ಬಂದು, 'ಗೋವಿಂದರಾಯರೆ ತಪ್ಪು ತಿಳಿಯಬೇಡಿ. ನಾನೇ ಆ ಎಸ್.ಸಿ. ದೇಸಾಯಿ' ಎಂದೆ.

ಅವರು ಅಚ್ಚರಿಯ ದೃಷ್ಟಿಯಿಂದ ಕೆಲಕ್ಷಣ ನನ್ನನ್ನೇ ದಿಟ್ಟಿಸಿದರು. 'ಹೌದಾ, ನೀವೇನೆ ಆರ್ಟಿಸ್ಟ್ ದೇಸಾಯಿ?' ಎಂದಂದು, ಹಂಗರ ನನ್ನ ಕೆಲಸ ಹಗುರವಾಯಿತಲ್ಲ ಎಂದರು.

'ಏನಾಗಬೇಕಿತ್ತು ನನ್ನಿಂದ?' ಎಂದೆ.

"ಭೈರಪ್ಪನವರ 'ವಂಶವೃಕ್ಷ' ಪ್ರಕಾಶನಕ್ಕ ತಗೊಂಡೀನಿ, ಪ್ರಿಂಟೂ ನಡೆದದ. ಅದಕ್ಕೊಂದು ಮುಖಚಿತ್ರ ಮಾಡಿಸಲಿಕ್ಕಿತ್ತು. ನೀವು ಊರಿಗೆ ಬಂದೀರಂತ ತಿಳೀತು. ಅದಕ್ಕೆ ನಿಮ್ಮನ್ನ ಕಾಣಲಿಕ್ಕೆಂದು ಅಗಡಿಗೆ ಹೊರಟಿದ್ದೆ. ಮತ್ತ ನೀವು ಇಲ್ಲೆ ಭೆಟ್ಟಿಯಾದಿರಲ್ಲ! ನನ್ನ ಕೆಲಸನ ಆತು," ಎಂದೆನ್ನುತ್ತ ಕೈಚೀಲದೊಳಗಿಂದ ಪ್ರಿಂಟಾಗಿದ್ದ ಕೆಲ ಪುಟಗಳನ್ನ ಹೊರ ತೆಗೆದು 'ನೋಡ್ರಿ ಚಿತ್ರಕ್ಕೆ ಅನುಕೂಲವಾದ ಸಂದರ್ಭಗಳನ್ನ ಗುರ್ತಹಾಕೇನಿ, ಅವನ್ನ ನೋಡಿ ಚಿತ್ರ ಮಾಡಿ ಲಗೂ ಕಳಸ್ರಿ' ಎಂದರು. ಅದು ಅಲ್ಲಿಯೇ ವ್ಯವಹಾರ ಮುಗಿದ ನಿರ್ಧಾರದ ವಾಣಿಯಾಗಿತ್ತು.

'ನೀವಿಲ್ಲೆ ಗಾಡ್ಯಾಗ ಹೇಳಿದ್ರೆ ಹೆಂಗ? ಅಗಡಿಗೆ ಬಂದೇ ಕೊಡ್ರಿ ಚಿತ್ರಾ ಮಾಡತೇನಂತ' ಎಂದೆ.

'ಇಲ್ಲ, ದೇಸಾಯರ, ನೀವು ಭೆಟ್ಟಿಯಾದದ್ದಕ್ಕ ನಿಮ್ಮ ಶೇಷಾಚಲರಿಗೆ ನನ್ನ ನಮಸ್ಕಾರ ಹೇಳತೀನಿ. ನನಗೆ ಬಾಳಷ್ಟು ಕೆಲಸದ. ದಯವಿಟ್ಟು ಇಲ್ಲೇ ತೊಗೊಂಡು ನನ್ನ ಬಿಟ್ಟಬಿಡ್ರಿ. ಸವಣೂರ ಸ್ಟೇಷನ್ನದಾಗ ಹರಿಹರದಿಂದ ಬರೋ ಗಾಡೀ ಈ ಗಾಡಿಗೆ ಕ್ರಾಸ್ ಆಗತದಂತ, ನಾ ಮರಳಿ ಹುಬ್ಬಳ್ಳಿಗೇ ಹೋಗತೇನಿ' ಎಂದರು. ಇಷ್ಟೊತ್ತಿಗಾಗಲೇ ನಮ್ಮ ರೈಲು ಗುಡಗೇರಿ ತಲುಪಿತ್ತು.

ಮತ್ತೊಮ್ಮೆ 'ಅಗಡಿಗೆ ಬಂದಿದ್ರ ಛಲೋ ಆಗತಿತ್ತು' ಅಂದೆ.

'ಮತ್ತೊಮ್ಮೆ ನೋಡೋಣಂತೇಳ್ರಿ ದೇಸಾಯ್ರ. ಈಗ ಬಿಟ್ಟಬಿಡ್ರಿ ನನ್ನ' ಅಂದ್ರು.

ಸವಣೂರು ಬಂತು. ಅವರು ಇಳಿದರು. ನಮ್ಮ ಗಾಡಿ ಮುಂದೆ ಹೋಯಿತು.

ನಾನು 'ವಂಶವೃಕ್ಷ'ಕ್ಕೆ ಚಿತ್ರಮಾಡಿದೆನೋ ಎಂಬ ಅನುಮಾನ ನನ್ನಲ್ಲಿ ಇನ್ನೂ ಇದೆ. ಆ ಮಾತಿಗೆ ತುಂಬಾ ವರ್ಷಗಳಾದುವಲ್ಲ! ಆದರೆ, ಅದರಿಂದಾಗಿ ಗೋವಿಂದರಾಯರ ಪರಿಚಯವಾಯಿತು, ನಿಕಟವೂ ಆಯಿತು. ಮುಂಬೈಯಿಂದ ಬಂದಾಗೊಮ್ಮೆ ತಪ್ಪದೇ ಅವರನ್ನು ಕಾಣುತ್ತಿದ್ದೆ. ಆದರೇನು ಅಗಡಿಗೆ ಹೋಗುವ ಆ 'ಮತ್ತೊಮ್ಮೆ' ಮಾತ್ರ ಬರಲೇ ಇಲ್ಲ.

**ಹಾ.ಮಾ. ನಾಯಕ,**

ಮೈಸೂರು

ಕೋಲುಮುಖದ ಗೋವಿಂದರಾಯರದು ಕಡ್ಡಿ ವ್ಯಕ್ತಿತ್ವ. ನೋಡುವವರಿಗೆ ಅವರು ತೀರ ದುರ್ಬಲರು. ಆದರೆ ಅವರ ಮಾನಸಿಕ ದೃಢತೆ ಅಸಾಧಾರಣವಾದದ್ದು. ಸತ್ಯ, ನಿಷ್ಠೆ,

ಶ್ರದ್ಧೆ, ಪ್ರಾಮಾಣಿಕತೆ, ದುಡಿಮೆಗಳಲ್ಲಿ ಅವರು ಅದ್ವಿತೀಯರು. ಪುಸ್ತಕೋದ್ಯಮವನ್ನು ಅವರು ಕೇವಲ ಒಂದು ವೃತ್ತಿಯನ್ನಾಗಿ ಸ್ವೀಕರಿಸಿರಲಿಲ್ಲ. ಒಂದು ತಪಸ್ಸನ್ನಾಗಿ ನಿರ್ವಹಿಸಿದರು. ತಮ್ಮ ಸಹಜವಾದ ಅಭಿರುಚಿಗೆ ತಕ್ಕಂತೆ ನಡೆಸಿದರು. ಅವರ ಕರ್ತೃತ್ವಶಕ್ತಿ ಯಾರನ್ನಾದರೂ ಬೆರಗುಗೊಳಿಸುವಂಥದು. ಅವರು ಪ್ರಚಾರವನ್ನು ಬಯಸಿದವರಲ್ಲ; ಪಡೆದವರೂ ಅಲ್ಲ! ಯಾವುದೇ ಉದ್ಯಮ ನಿಸ್ಸಂದೇಹವಾಗಿ ವ್ಯವಹಾರ. ಆದರೆ ಪುಸ್ತಕೋದ್ಯಮವನ್ನು ಕಲೆಯನ್ನಾಗಿಸಲು ಪ್ರಯತ್ನಿಸಿದವರು ಕೆಲವೇ ಕೆಲವರು. ಅಂಥವರಲ್ಲಿ ನನ್ನ ನೆನಪಿಗೆ ಬರುವವರು 'ಕಾವ್ಯಾಲಯ'ದ ಕೂಡಲಿ ಚಿದಂಬರಂ; 'ಶಾರದಾ ಮಂದಿರ'ದ ಪ್ರೊಫೆಸರ್ ಶಂಕರನಾರಾಯಣರಾವ್ ಹಾಗೂ 'ಸಾಹಿತ್ಯ ಭಂಡಾರ'ದ ಮಂಗಳೂರು ಗೋವಿಂದರಾವ್. ಇಂಥವರು ಪ್ರತಿನಿಧಿಸುವ ವ್ಯವಹಾರ ಪ್ರಪಂಚ ಪ್ರತ್ಯೇಕವಾದದ್ದು, ವಿಶಿಷ್ಟವಾದದ್ದು, ನೆನಪಿನಲ್ಲಿಡುವಂಥದು!

ಪುಸ್ತಕೋದ್ಯಮದಿಂದಲೇ ಬದುಕುವುದು ಸಾಹಸದ ಕೆಲಸವಾಗಿದ್ದರೂ ಯಾವ ಸಂದರ್ಭದಲ್ಲಿಯೂ ಗೋವಿಂದರಾಯರು ಎದೆಗೆಡಲಿಲ್ಲ. ತಮ್ಮ ಕೆಲಸದಲ್ಲಿ ಅವರಿಗೆ ಅಚಲವಾದ ಶ್ರದ್ಧೆ ನಿಷ್ಠೆಗಳಿದ್ದವು. ಪ್ರಾಮಾಣಿಕತೆ ಅವರ ವ್ಯವಹಾರದ ಅಡಿಪಾಯವಾಗಿತ್ತು. ಶುದ್ಧ ಅಭಿರುಚಿಯನ್ನು ಕಾಪಾಡಿಕೊಂಡಿದ್ದರು.

ಮುದ್ರಣಕಾಗದವನ್ನು ದೊರಕಿಸುವುದೂ ಸಾಹಸದ ಕೆಲಸವಾಗಿದ್ದ ದಿನಗಳಲ್ಲಿ ಗೋವಿಂದರಾಯರು ಕರ್ನಾಟಕ ಸಾಹಿತ್ಯ ಮಾಲೆ, ಸರ್ವೋದಯ ಸಾಹಿತ್ಯ ಮಾಲೆ, ಸಾಹಿತ್ಯ ಭಂಡಾರ ಮೊದಲಾದ ಹೆಸರುಗಳಲ್ಲಿ ತಮ್ಮ ಪ್ರಕಾಶನದ ಪುಸ್ತಕಗಳನ್ನು ಪ್ರಕಟಿಸುತ್ತಿದ್ದರು.

ಶ್ರವಣಬೆಳಗೊಳ ಸಾಹಿತ್ಯ ಸಮ್ಮೇಳನದ ಅನಂತರದ ದಿನಗಳಲ್ಲಿ ಒಮ್ಮೆ ಗೋವಿಂದರಾಯರು ನನ್ನ ಬಳಿ ಬಂದಿದ್ದರು. ಅದೇ ನಾನು ಅವರನ್ನು ಮೊದಲ ಸಲಕ್ಕೆ ಕಂಡೆನೆಂಬ ನೆನಪು. ಸಾಹಿತ್ಯ ಸಮ್ಮೇಳನಕ್ಕೆ ನಾನು ಒಪ್ಪಿಸಿದ್ದ ಪ್ರಬಂಧದಲ್ಲಿ ಅವರು ಪ್ರಕಟಿಸಿದ್ದ ಎಸ್.ಎಲ್. ಭೈರಪ್ಪನವರ 'ವಂಶವೃಕ್ಷ' ಕಾದಂಬರಿಯ ಬಗ್ಗೆ ಕೆಲವು ಮಾತುಗಳನ್ನು ಬರೆದಿದ್ದೆ. ಅದು ಅವರಿಗೆ ಸಂತೋಷವನ್ನುಂಟು ಮಾಡಿತ್ತು. ಆ ಮಾತುಗಳನ್ನು ಪುಸ್ತಕದ ಮುಂದಿನ ಮುದ್ರಣದಲ್ಲಿ ಬಳಸಲು ನನ್ನ ಒಪ್ಪಿಗೆಯನ್ನು ಕೇಳಿದರು. ಅದೇ ಸಂದರ್ಭದಲ್ಲಿ ನಾನು ಅವರನ್ನು ಕೇಳಿದೆ: 'ನಿಮ್ಮ ಪ್ರಕಟಣೆಗಳ ವಿನ್ಯಾಸ ಮತ್ತು ಸೌಂದರ್ಯವನ್ನು ಬದಲಿಸಬೇಕಾದ ಅಗತ್ಯ ನಿಮಗೆ ಕಂಡಿಲ್ಲವೆ?' ಒಂದು ನಿಮಿಷ ಸುಮ್ಮನಾಗಿ ಅವರು ತಿರುಗಿ ನನ್ನನ್ನು ಕೇಳಿದರು: 'ಪುಸ್ತಕ ಕೊಳ್ಳುವವರು ಅದರ ಒಳಗೇನಿದೆ ಎಂಬುದರಲ್ಲಿ ಆಸಕ್ತರಾಗಿರುತ್ತಾರೆಯೋ, ವಿನ್ಯಾಸದಲ್ಲಿ ಆಸಕ್ತರಾಗಿರುತ್ತಾರೆಯೋ?' ಇದು ಅವರ ದೃಷ್ಟಿಯನ್ನು ಸೂಚಿಸುತ್ತದೆ. 'ಪುಸ್ತಕೋದ್ಯಮವನ್ನು ಒಂದು ವ್ಯವಹಾರ ಎಂದುಕೊಂಡಾಗ ನಿಮ್ಮ ದೃಷ್ಟಿ ಸರಿಹೋಗಲಾರದು' ಎಂದು ನಾನು ಅವರಿಗೆ ವಿವರಿಸಿದೆ. ಆಗ ಅವರೇನೂ ಮಾತನಾಡಲಿಲ್ಲ.

ಕಳೆದ ಕಾಲು ಶತಮಾನದಲ್ಲಿ ಗೋವಿಂದರಾಯರು ಭೈರಪ್ಪನವರ ಪ್ರಕಾಶಕರೆಂದೇ ಪ್ರಸಿದ್ಧರು! ಭೈರಪ್ಪನವರ ಆರಂಭದ ಒಂದೆರಡು ಚಿಕ್ಕ ಪುಸ್ತಕಗಳನ್ನು ಬಿಟ್ಟರೆ, ಉಳಿದ ಎಲ್ಲ ಪುಸ್ತಕಗಳೂ ಪ್ರಕಟವಾಗಿರುವುದು 'ಸಾಹಿತ್ಯ ಭಂಡಾರ'ದಿಂದಲೇ! ಗೋವಿಂದರಾಯರ ಪ್ರಾಮಾಣಿಕ ವ್ಯವಹಾರ ತಮಗೆ ಮೆಚ್ಚುಗೆಯಾಗಿರುವುದಾಗಿ ಭೈರಪ್ಪನವರು ನನ್ನೊಡನೆ ಅನೇಕ ಬಾರಿ

ಹೇಳಿದ್ದಾರೆ; ಅನೇಕ ಸಂದರ್ಭಗಳನ್ನು ವಿವರಿಸಿದ್ದಾರೆ. ಭೈರಪ್ಪ ಮತ್ತು ಗೋವಿಂದರಾಯರ ಸಂಬಂಧ ಕೇವಲ ಲೇಖಕ ಪ್ರಕಾಶಕರ ಸಂಬಂಧವಾಗಿರದೆ ಕೌಟುಂಬಿಕ ಸಂಬಂಧದಂತೆ ನನಗೆ ತೋರಿದೆ! ಗೋವಿಂದರಾಯರೂ ಹಲವು ಸಲ ನನ್ನೊಡನೆ ಭೈರಪ್ಪನವರ ಬಗೆಗೆ ಮೆಚ್ಚುಗೆ ಸೂಚಿಸಿದ್ದು ನೆನಪಿನಲ್ಲಿದೆ. ಈ ಇಬ್ಬರ ಈ ಬಗೆಯ ಸಂಬಂಧ ತುಂಬ ವಿರಳವಾದದ್ದು. ಲೇಖಕ ಪ್ರಕಾಶಕರಿಬ್ಬರಿಗೂ ಆದರ್ಶಪ್ರಾಯವಾದ ಸಂಬಂಧ ಇದು. ವ್ಯವಹಾರಮಯವಾದ ಈ ದಿನಗಳಲ್ಲಿ ಇಂತಹವರನ್ನು ಇನ್ನೆಲ್ಲಿ ನೋಡೋಣ?

ಗೋವಿಂದರಾಯರನ್ನು ನಾನು ಅನೇಕ ಸಲ ಭೇಟಿಯಾಗಿದ್ದೇನೆ. ಅವರೆಂದೂ ಕಾಡು ಹರಟೆಯಲ್ಲಿ ಆಸಕ್ತರಾದವರಾಗಿರಲಿಲ್ಲ. ನನ್ನೊಂದಿಗೆ ಅವರು ಯಾವಾಗಲೂ ಪುಸ್ತಕೋದ್ಯಮವನ್ನು ಕುರಿತು ಚರ್ಚಿಸುತ್ತಿದ್ದರು. ಬೇಂದ್ರೆ, ಶಂ.ಬಾ. ಮುಂತಾದವರನ್ನು ಕುರಿತು ಹೇಳುತ್ತಿದ್ದರು. ಅವರ ಅನುಭವಗಳನ್ನು ಕೇಳುವುದು ಕುತೂಹಲಕಾರಿಯಾಗಿರುತ್ತಿತ್ತು. ನಿಧಾನವಾಗಿ ಮಾತುಗಳನ್ನು ತೂಗಿ ಆಡುತ್ತಿದ್ದರು. ಮೇಲುನೋಟಕ್ಕೆ ಅವರು ಸಂಪ್ರದಾಯ ಶರಣರಾಗಿ ತೋರುತ್ತಿದ್ದರು. ಅಂತರಂಗದಲ್ಲಿ ಹೊಸ ಹೊಸ ವಿಚಾರಗಳಿಗೆ ಅವಕಾಶ ಮಾಡಿಕೊಡುತ್ತಿದ್ದರು.

ಕಾಲ ಬದಲಾಗುತ್ತದೆ. ನಾವೂ ಬದಲಾಗಬೇಕಾದ್ದು ಅಗತ್ಯ. ಆದರೆ ಹುಚ್ಚು ಹೊಳೆಯಲ್ಲಿ ತೇಲಿಹೋಗಬಾರದು. ವಿವೇಚನೆಯನ್ನು ಕಳೆದುಕೊಳ್ಳಬಾರದು' ಎಂಬ ಅವರ ಮಾತುಗಳನ್ನು ನಾನು ಅನೇಕ ಸಲ ಅವರಿಂದ ಕೇಳಿದ್ದೇನೆ. ವಿವೇಚನೆಯಿಲ್ಲದ ಬದಲಾವಣೆಯನ್ನು, ಸುಧಾರಣೆಯನ್ನು ಅವರೆಂದೂ ಪ್ರೋತ್ಸಾಹಿಸಿದವರಲ್ಲ. ಅಂಥ ಆರೋಗ್ಯಕರ ದೃಷ್ಟಿಯನ್ನು ಅವರು ಕೊನೆಯವರೆಗೂ ಕಾಪಾಡಿಕೊಂಡು ಬಂದರೆಂಬುದು ಸಂತೋಷದ ಸಂಗತಿ. ಜೀವನದ ಮೌಲ್ಯಗಳು ಉಜ್ವಲವಾಗಿ ಹೊಳೆಯುತ್ತಿದ್ದ ಕಾಲವನ್ನು ಕಂಡ ಮಂಗಳೂರು ಗೋವಿಂದ ರಾಯರು ಅವು ನಶಿಸುವುದನ್ನೂ ಕಂಡರೆಂಬುದು ಒಂದು ವಿಪರ್ಯಾಸ! ಕಾಲದ ಮಹಿಮೆ! ಆದರೆ, ಹಾಗಾಗಬೇಕಿಲ್ಲ ಎಂಬುದಕ್ಕೆ ಸ್ವತಃ ಅವರೇ ಒಂದು ಸಾಕ್ಷಿಯಾಗಿದ್ದರು!

**ಶ್ರೀ ಶೇಷನಾರಾಯಣ,** ಬೆಂಗಳೂರು

೧೯೬೫-೭೦ರ ಅವಧಿಯಲ್ಲಿ ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಬಿ.ಎಂ.ಶ್ರೀ. ಅಚ್ಚುಕೂಟಕ್ಕೆ ಮೇಲ್ವಿಚಾರಕನಾಗಿದ್ದೆ. ಒಂದು ದಿನ ನಮ್ಮ ಅಚ್ಚುಕೂಟಕ್ಕೆ ನನ್ನ ಹಾಗೆಯೇ ಇರುವ ಒಬ್ಬ ಕೃಶ ದೇಹದ ವ್ಯಕ್ತಿ ಬಂದರು. ಯಾರೋ ಗಿರಾಕಿ ಎಂದು 'ಬನ್ನಿ' ಎಂದೆ. ಆ ವ್ಯಕ್ತಿ ನನ್ನೆದುರಿನ ಕುರ್ಚಿಯಲ್ಲಿ ಕುಳಿತು 'ನಾನು ಸಾಹಿತ್ಯ ಭಂಡಾರದ ಗೋವಿಂದರಾಯ' ಎಂದು ಪರಿಚಯ ಮಾಡಿಕೊಂಡರು. 'ಹೌದಾ? ಸಂತೋಷ. ನಾನು ನಿಮ್ಮ ಹೆಸರನ್ನು ಕೇಳಿದ್ದೆ. ನೋಡಿರಲಿಲ್ಲ' ಎಂದೆ. ನಮ್ಮ ಪರಿಚಯ ಸ್ನೇಹ ಆಗಿನಿಂದ ಹೀಗೆ ಪ್ರಾರಂಭವಾಯಿತು.

ಅವರು ನಮ್ಮಲ್ಲಿ ಬಂದುದರ ಹಿನ್ನೆಲೆ ಹೀಗಿದೆ. ಪುಸ್ತಕಗಳನ್ನು ಅಚ್ಚುಕಟ್ಟಾಗಿ ಒಂದು ತಪ್ಪೂ ಉಳಿಯದ ಹಾಗೆ ಎಚ್ಚರವಹಿಸಿ ಮುದ್ರಣ ಮಾಡುವುದರಲ್ಲಿ ನಾನು ಈಗಾಗಲೇ ಹೆಸರು ಗಳಿಸಿದ್ದೆ. ಪರಿಷತ್ತಿನ ಅಚ್ಚುಕೂಟಕ್ಕೆ ಸೇರುವ ಮೊದಲು ಮೈಸೂರಿನಲ್ಲಿಯ ಶಕ್ತಿ

ಮುದ್ರಣಾಲಯದ ಮೇಲ್ವಿಚಾರಕನಾಗಿದ್ದೆ.

ಆಗ ಮೈಸೂರಿನಲ್ಲಿ ಮೂರು ಅಚ್ಚುಕೂಟಗಳು ಮುದ್ರಣದಲ್ಲಿ ತುಂಬಾ ಹೆಸರು ಗಳಿಸಿದ್ದವು. ಒಂದು ವೆಸ್ಲಿ ಪ್ರೆಸ್; ಮತ್ತೊಂದು ರಾಮರಾಯರ ಪ್ರೆಸ್; ಇನ್ನೊಂದು ಈ ಶಕ್ತಿ ಪ್ರೆಸ್. ಮೈಸೂರಿನಲ್ಲಿ ಲೇಖಕರು-ಪ್ರಕಾಶಕರು ಜಾಸ್ತಿ. ಜತೆಗೆ ವಿಶ್ವವಿದ್ಯಾನಿಲಯದವರು ಬೇರೆ. ಹೀಗಾಗಿ ಈ ಎಲ್ಲರ ಪುಸ್ತಕಗಳನ್ನೂ ಈ ಮೂರು ಅಚ್ಚುಕೂಟಗಳು ಹಂಚಿಕೊಂಡು ಮುದ್ರಣ ಮುಗಿಸುತ್ತಿದ್ದವು.

ಮೈಸೂರನ್ನು ಬಿಟ್ಟು ನಾನು ಪರಿಷತ್ತಿನ ಅಚ್ಚುಕೂಟಕ್ಕೆ ಬಂದು ಸೇರಿಕೊಂಡ ಮೇಲೆ, ಡಿ.ವಿ.ಕೆ. ಮೂರ್ತಿ ಒಬ್ಬರನ್ನು ಬಿಟ್ಟು, ಉಳಿದ ಎಲ್ಲ ಮೈಸೂರಿನ ಪ್ರಕಾಶಕರ ಮತ್ತು ಲೇಖಕರ ಪುಸ್ತಕಗಳು ನಮ್ಮಲ್ಲಿಗೆ ಮುದ್ರಣಕ್ಕೆ ಬರತೊಡಗಿದವು. ಪರಿಷತ್ತಿನ ಅಚ್ಚುಕೂಟದಲ್ಲಿ ಮುದ್ದಾಗಿ ಪುಸ್ತಕಗಳು ಅಚ್ಚಾಗುತ್ತ ಇವೆ ಎನ್ನುವ ಪ್ರಣಾಲಿ ಹರಡಿಕೊಂಡಿತ್ತು. ಹೀಗಾಗಿ ಗೋವಿಂದರಾಯರು ಒಂದು ದಿನ ನಮ್ಮಲ್ಲಿಗೆ ಬಂದದ್ದು.

'ಸಾಹಿತ್ಯ ಭಂಡಾರ'ದ ಆರು ಏಳು ಪುಸ್ತಕಗಳನ್ನು ಆ ಸಂದರ್ಭದಲ್ಲಿ ನಾನು ಅಚ್ಚು ಮಾಡಿದೆ. ಬಹುತೇಕ ಎಲ್ಲವೂ ಭೈರಪ್ಪನವರ ಕಾದಂಬರಿಗಳೇ. ಹೊಸ ಕಾದಂಬರಿ, ಮರುಮುದ್ರಣ; ಹೀಗೆ. ಅವರ ಪ್ರಕಾಶನದ ಬೇರೆಯವರ ಒಂದೆರಡು ಕೃತಿಗಳೂ ಅಚ್ಚಾದವು.

ಗೋವಿಂದರಾಯರದು ಶಿಸ್ತಿನ ಜೀವನ. ಅವರು ಪ್ರೂಫ್ ನೋಡುವಾಗಲೂ ಅಷ್ಟೇ. ನಿಧಾನವಾಗಿ ಒಂದೊಂದು ಸಾಲನ್ನೂ ಶ್ರದ್ಧೆಯಿಂದ ನೋಡುವ ಪರಿಪಾಠ. ಪರಿಷತ್ತಿನ ಅಚ್ಚುಕೂಟದಲ್ಲಿ ಅಚ್ಚಿನ ಮೊಳೆಗಳ ಕೊರತೆ ತುಂಬಾ. ಒಂದೆರಡು ಸಲ ಈ ಕೊರತೆಯಿಂದಾಗಿ ಅಚ್ಚಿನ ಮೊಳೆಗಳು ಇನ್ನೇನೋ ಕೆಲಸಕ್ಕೆ ನನಗೆ ಬೇಕಾಗಿ, ಅವರಿಗೆ ತೋರಿಸದೆಯೇ ಒಂದೆರಡು ಫಾರ್ಮುಗಳನ್ನು ನಾನು ಅಚ್ಚು ಮಾಡಿದ್ದುಂಟು. ಅವರು ಬಂದಮೇಲೆ 'ಹೀಗಾಯ್ತು' ಎಂದು ಹೇಳಿದ್ದುಂಟು. ಆಗ ಅವರು ಗಾಬರಿಯಾಗಿ ಎಲ್ಲ ಪುಟಪುಟಗಳ ಮೇಲೂ ಎರಡೆರಡು ಸಲ ಕಣ್ಣಾಡಿಸಿ ಸಾಲು ಸಾಲುಗಳ ಪ್ಯಾರಾ ಪ್ಯಾರಾಗಳ ಕಾಲುವೆಗಳ ದಂಡೆಗಳ ಮೇಲೆಲ್ಲ ಕಣ್ಣೋಟ ಹರಿಸಿ ಯಾವ ತಪ್ಪೂ ಉಳಿಯದಂತೆ ಅಚ್ಚಾಗಿರುವುದನ್ನು ನೋಡಿ ತೃಪ್ತಿಯಿಂದ ನನ್ನನ್ನು ನೋಡಿ ಕಿರುನಗೆ ನಕ್ಕದ್ದೂ ಉಂಟು. ಈ ರೀತಿ ನನ್ನ ಮೇಲೆ ಅವರಿಗೆ ತುಂಬಾ ಅಭಿಮಾನ ಬೆಳೆಯಿತು.

ಈ ಅಭಿಮಾನದಿಂದಲೇ ಏನೋ, ಒಂದು ಸಲ ಅವರಾಗಿಯೇ 'ನಿಮ್ಮ ಒಂದು ಕಾದಂಬರಿಯನ್ನು ಕೊಡಿ. ನಮ್ಮ ಪ್ರಕಾಶನದಿಂದ ಹೊರಬರಲಿ' ಎಂದರು. ಹೀಗಾಗಿ 'ಎರಡು ಉಂಗುರ' ಎನ್ನುವ ನನ್ನ ಒಂದು ಕಾದಂಬರಿ 'ಸಾಹಿತ್ಯ ಭಂಡಾರ'ದ ಪ್ರಕಟಣೆಯಾಗಿ ಹೊರಬಂತು. ಇದರಿಂದ ನನಗೆ ತುಂಬಾ ಪ್ರಯೋಜನವೂ ಆಯಿತು.

ಹೌದು. ಕಳೆದ ಹದಿನೈದು ಹದಿನೆಂಟು ವರ್ಷಗಳಿಂದಲೂ ನಾನು ಮೂಲವ್ಯಾಧಿಯಿಂದ ಬಹಳವಾಗಿ ನರಳುತ್ತ ಇದ್ದೆ. ಇದು ಯಾವುದಕ್ಕೂ ಜಗ್ಗುವುದಿಲ್ಲ ಎಂದು ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಲು ಒಂದು ನರ್ಸಿಂಗ್ ಹೋಂ ಸೇರಿದೆ. ನಾನು ನರ್ಸಿಂಗ್ ಹೋಮ್ ಸೇರುವುದಕ್ಕೆ ಮೊದಲು, ಒಂದು ವಾರ ಇದೆ ಎನ್ನುವಾಗ, ಗೋವಿಂದರಾಯರು 'ಎರಡು ಉಂಗುರ'

ಕಾದಂಬರಿಯ ಪೂರಾ ಗೌರವಧನವನ್ನು ಒಂದು ಕವರಿನಲ್ಲಿ ಹಾಕಿ ತಂದುಕೊಟ್ಟರು, ನಾನು ಕೇಳದೆಯೇ. 'ಇಷ್ಟು ಪರ್ಸೆಂಟ್ ರಾಯಲ್ಟಿ. ಪೂರಾ ಮೊಬಲಗು ಇದೆ. ಒಳ್ಳೆಯದಾಗಲಿ' ಎಂದರು. ನರ್ಸಿಂಗ್ ಹೋಮಿಗೂ ಎರಡು ದಿನಗಳು ಹಣ್ಣಿನ ಚೀಲ ಹೊತ್ತು ಬಂದಿದ್ದರು.

ಆಮೇಲೆ ಪರಿಷತ್ತಿನ ಅಚ್ಚುಕೂಟವನ್ನು ಬಿಟ್ಟು ನಾನೇ ಒಂದು ಮುದ್ರಣಾಲಯವನ್ನು ತೆರೆದೆ. ಗೋವಿಂದರಾಯರು ಅಲ್ಲಿಗೂ ಬಂದರು. ಆದರೆ ನಾನು ಸಾಲ ಸೋಲ ಮಾಡಿ ಅಚ್ಚುಕೂಟ ಪ್ರಾರಂಭಿಸಿದ್ದರಿಂದ, ಪರಿಷತ್ತಿನ ಅಚ್ಚುಕೂಟದ ದರದಲ್ಲಿ ಮುದ್ರಣ ಮಾಡಲು ಆಗುತ್ತಾ ಇರಲಿಲ್ಲ. ನನ್ನ ಸ್ವಂತ ಅಚ್ಚುಕೂಟದಲ್ಲಿ ದರ ಜಾಸ್ತಿ ಎಂದು ಗೋವಿಂದರಾಯರು ಪ್ರತಿಗಳ ಸಂಖ್ಯೆಯನ್ನು ಕಡಿಮೆ ಮಾಡಿದರು. ಆದರೆ ಬರುವುದನ್ನೂ ಮುದ್ರಣ ಮಾಡಿಸು ವುದನ್ನೂ ನಿಲ್ಲಿಸಲಿಲ್ಲ.

೧೯೭೦ರಿಂದ ೧೯೭೭ರವರೆಗೆ ನನ್ನ ಅಚ್ಚುಕೂಟ ಇತ್ತು. ಆಮೇಲೆ ಪಾಲುದಾರಿಕೆ ವ್ಯವಹಾರದಲ್ಲಿ ಅದನ್ನು ಮುಚ್ಚಬೇಕಾಯಿತು. ಭಾರೀ ಕೈಸುಟ್ಟುಕೊಂಡೆ. ಈ ಸಂದರ್ಭದಲ್ಲಿ ನಾನು ತುಂಬಾ ಅಪಮಾನಕ್ಕೂ ಹೇಳಿಕೊಳ್ಳಲು ಆಗದಂಥ ಕಷ್ಟ ನಷ್ಟಗಳಿಗೂ ಗುರಿಯಾದೆ. ಅನಂತರ ನಾಲ್ಕು ವರ್ಷಗಳ ಕಾಲ ನಾನು ಮದರಾಸಿನಲ್ಲಿ ಇರಬೇಕಾಯಿತು; ಇದ್ದೆ.

ಮದರಾಸಿನಿಂದ ಹಿಂದಿರುಗಿ ಮತ್ತೆ ಬೆಂಗಳೂರಿಗೆ ಬಂದಮೇಲೆ, ಒಂದು ದಿನ ಗೋವಿಂದ ರಾಯರನ್ನು ನೋಡಲು ಹೊರಟೆ. ಆಗ ಅವರು ಸಣ್ಣ ಮನೆ ಬಿಟ್ಟು ದೊಡ್ಡ ಮನೆ ಮಾಡಿದ್ದರು. ನನ್ನನ್ನು ನೋಡಿ ಅವರಿಗೆ ಮಾತೇ ಹೊರಡಲಿಲ್ಲ. 'ನಿಮ್ಮ ಶ್ರಮ ವ್ಯರ್ಥವಾಯ್ತು' ಎಂದು ಮೆಲ್ಲನೆ ಗುಣಗುಣಿಸಿದರು. ಮತ್ತೆ ಮತ್ತೆ ನನ್ನನ್ನೇ ದಿಟ್ಟಿಸಿದರು. ಅವರ ಕಣ್ಣಂಚುಗಳು ನೆನೆಯಾದವೋ ಏನೋ!

ಹೌದು, ಅವರು ದುಡಿಮೆಯ ಬೆಲೆಯನ್ನು ಚನ್ನಾಗಿ ಅರಿತಿದ್ದವರು. ದುಡಿದೇ ಮುಂದಕ್ಕೆ ಬಂದಿದ್ದವರು. ಹೀಗಾಗಿ ಹುಟ್ಟು ದುಡಿಮೆಗಾರನಾದ ನನ್ನ ಪ್ರಯತ್ನ ನನ್ನ ಸಾಹಸ ವ್ಯರ್ಥ ವಾಯಿತು, ಸ್ನೇಹಿತರ ಆಸೆ ಆಕಾಂಕ್ಷೆಗಳು ಈಡೇರಲಿಲ್ಲ, ಎನ್ನುವ ನೋವಿನ ಎಳೆ ಅವರ ಮುಖದಲ್ಲಿ ಎದ್ದು ಕಾಣುತ್ತಿತ್ತು.

ಪ್ರಕಾಶಕರಾಗಿ ಈ ನಾಡಿನಲ್ಲಿ ತುಂಬಾ ಜನ ಇದ್ದಾರೆ ನಿಜ. ಆದರೆ 'ಕಾವ್ಯಾಲಯ'ದ ಕೂಡಲಿ ಚಿದಂಬರಂ, 'ಸಾಹಿತ್ಯ ಭಂಡಾರ'ದ ಗೋವಿಂದರಾಯರು–ಇಂಥ ಪ್ರಕಾಶಕರು ಎಷ್ಟು ಜನ ಇದ್ದಾರೆ? ಸಿಗುತ್ತಾರೆ?

ಹೌದು ಆ ಕಾಲದಲ್ಲಿಯೇ ಕೂಡಲಿ ಚಿದಂಬರಂ ಎಂ.ಎ., ಬಿ.ಎಲ್., ಮಾಡಿದ್ದವರು. ಕುವೆಂಪು ಸಹಪಾಠಿ. ಉದ್ಯೋಗಕ್ಕೆ ಸೇರಿದ್ದರೆ ಹೈಕೋರ್ಟ್ ನ್ಯಾಯಾಧೀಶರಾಗಿ ನಿವೃತ್ತರಾಗಬಹು ದಿತ್ತು. ಆದರೆ ಒಂದು ತಪಸ್ಸು ಎನ್ನುವ ಹಾಗೆ ಅವರು ಪ್ರಕಾಶಕರಾಗಿ ನಿಂತು, ಹಲವು ಲೇಖಕರ ಏಳ್ಗೆಗೆ ಕಾರಣರಾಗಿದ್ದವರು. ಗೋವಿಂದರಾಯರೂ ಹಾಗೆಯೇ ತಮ್ಮ ವೃತ್ತಿ ಒಂದು ಪವಿತ್ರವಾದ ಕೆಲಸ ಎಂದು ದೃಢವಾಗಿ ನಂಬಿದ್ದರು. ಅಚ್ಚುಕಟ್ಟು, ಶಿಸ್ತು, ಸಂಯಮ–ಎಲ್ಲವನ್ನು ಅವರಲ್ಲಿ ಕಲಿಯಬೇಕು; ಹಾಗೆ ಅವರ ನಡವಳಿಕೆ. ಯಾವ ಸಂದರ್ಭದಲ್ಲಿಯೂ ಸ್ಥಿಮಿತವನ್ನು ಕಳೆದುಕೊಳ್ಳುವವರಲ್ಲ. ನೋಡುವುದಕ್ಕೆ ತುಂಬಾ ಜಿಗುಟೇನೋ ಎನ್ನುವ ಹಾಗೆ. ಆದರೆ

ಅವರ ಹೃದಯ ಕೋಮಲವಾಗಿತ್ತು. ಅವರ ನಡೆ ನುಡಿ ಹಿತಮಿತ; ಚೊಕ್ಕ.

ಗೋವಿಂದರಾಯರಂಥವರನ್ನು ನೆನಪಿಸಿಕೊಳ್ಳುವುದೇ ಒಂದು ಹಿತವಾದ ಅನುಭವ. ಹೊಂಗೆಯ ಮರದ ಚಿಗುರೆಲೆಗಳ ಬೀಸಿನಿಂದ ತೇಲಿ ಬರುವ ಗಾಳಿಯ ಹಾಗೆ. ಅವರಂಥ ಶುದ್ಧ ಮನಸ್ಸಿನ ವ್ಯಕ್ತಿಗಳು ಇಂದಿನ ಆಷಾಢಭೂತೀ ದಿನಗಳಲ್ಲಿ ಕಾಣಸಿಗುವವರು ವಿರಳ.

## ಶ್ರೀ ಸೂ. ಸುಬ್ರಹ್ಮಣ್ಯ, ಬೆಂಗಳೂರು

ಬೆಂಗಳೂರಿನಲ್ಲಿ ಕರ್ನಾಟಕ ರಾಜ್ಯೋತ್ಸವ ಸಾಹಿತ್ಯ ಪ್ರಚಾರ ಸಮಿತಿಯನ್ನು ಆರಂಭಿಸಿದ್ದು ೧೯೬೫ರಲ್ಲಿ ಎಂದು ನನ್ನ ನೆನಪು. ಅದರ ಅಧ್ಯಕ್ಷರು ಡಾ॥ ರಂ.ಶ್ರೀ. ಮುಗಳಿ; ಕಾರ್ಯಾಧ್ಯಕ್ಷರು ಶ್ರೀ ಜಿ. ನಾರಾಯಣ ಅವರು. ಸಮಿತಿಯ ಮೂವರು ಕಾರ್ಯದರ್ಶಿಗಳಲ್ಲಿ ನಾನೂ ಒಬ್ಬ. ಸಮಿತಿಯ ಉದ್ದೇಶ ಬೆಂಗಳೂರಿನ ವಿವಿಧ ಬಡಾವಣೆಗಳಲ್ಲಿ ಕನ್ನಡ ಪುಸ್ತಕಗಳ ಪ್ರದರ್ಶನ ಹಾಗೂ ಮಾರಾಟ. ಚಾಮರಾಜಪೇಟೆ (ಕನ್ನಡ ಸಾಹಿತ್ಯ ಪರಿಷತ್ತು), ಅಲಸೂರು (ಭಾರತೀಯ ಕನ್ನಡ ಸಂಘ), ಮತ್ತು ಮಲ್ಲೇಶ್ವರ(ಗಾಂಧಿ ಸಾಹಿತ್ಯ ಸಂಘ)ಗಳಲ್ಲಿ ಪುಸ್ತಕ ಪ್ರದರ್ಶನ ನಡೆಯಿತು. ಕೊನೆಯ ದಿನ ಮಲ್ಲೇಶ್ವರದ ಬೀದಿಬೀದಿಗಳಲ್ಲಿ ಕಾರ್ಯಕರ್ತರಿಂದ ಗಾಡಿಗಳ ಮೇಲೆ ಪುಸ್ತಕ ಹೊತ್ತು ಮನೆಮನೆಗೆ ಮಾರಾಟದ ವ್ಯವಸ್ಥೆ ನಡೆದಿತ್ತು.

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ ಪುಸ್ತಕಗಳ ಪ್ರದರ್ಶನ ಮತ್ತು ಮಾರಾಟಕ್ಕೆ ನಾಡಿನ ವಿವಿಧ ಮೂಲೆಗಳ ಪ್ರಕಾಶಕರಿಂದ ಪುಸ್ತಕಗಳ ಮಹಾಪೂರವೇ ಬಂದು ಸೇರಿತು. ಅವುಗಳ ಶೇಖರಣೆ, ಜೋಡಣೆ, ಪ್ರದರ್ಶನ ಹಾಗೂ ಮಾರಾಟದ ವ್ಯವಸ್ಥೆ ಅಚ್ಚುಕಟ್ಟಾಗಿದ್ದಿತು. ಪ್ರಕಾಶಕರೇ ತಮ್ಮ ಪುಸ್ತಕಗಳನ್ನು ಮಾರಾಟ ಮಾಡಿದರೂ ಅದರ ಲೆಕ್ಕ ಸಾಹಿತ್ಯ ಪ್ರಚಾರ ಸಮಿತಿಯ ಕಟ್ಟುಪಾಡಿಗೆ ಸೇರಿರುತ್ತಿತ್ತು.

ಈ ವ್ಯವಸ್ಥೆಯ ಪೂರ್ವಭಾವಿ ಸಭೆಗಳಲ್ಲಿ ಹಲವು ವೇಳೆ ಕಾರ್ಯಕರ್ತರಾಗಿ ಭಾಗವಹಿಸುತ್ತಿದ್ದವರಲ್ಲಿ ಶ್ರೀ ಗೋವಿಂದರಾಯರೂ ಒಬ್ಬರು. ಆ ಸಭೆಗಳಲ್ಲಿ ಪ್ರಕಾಶಕರ ದೃಷ್ಟಿಯಿಂದ ಅವರು ಹಲವಾರು ಸಲಹೆಗಳನ್ನು ಮಂಡಿಸುತ್ತಿದ್ದರು. ಯಾವುದೇ ಅಭಿಪ್ರಾಯವನ್ನು ಅವರು ಒಪ್ಪದಿದ್ದರೆ, ಅದನ್ನು ನೇರವಾಗಿ, ಆದರೆ ನಯವಾಗಿ, ಖಂಡಿಸುವ ದಾರ್ಷ್ಟ್ಯ ಅವರದು. ಅವರ ಅಭಿಪ್ರಾಯವನ್ನು ತಳ್ಳಿ ಹಾಕಿದ್ದರೂ ಅವರು ಆ ಬಗ್ಗೆ ಸಣ್ಣ ಸಣ್ಣ ಗುಂಪುಗಳಲ್ಲಿ ಅದನ್ನು ಚರ್ಚಿಸುತ್ತಲೇ ಇರುತ್ತಿದ್ದರು. ಹಿಡಿದ ಪಟ್ಟನ್ನು ಸುಲಭವಾಗಿ ಸಡಿಲಿಸುವ ಜಾಯಮಾನ ಅವರದಾಗಿರಲಿಲ್ಲ.

ಆ ದಿನಗಳಲ್ಲಿ ನಾನೊಮ್ಮೆ ಅವರ ಪುಸ್ತಕಗಳ ಬೆಲೆ ಸ್ವಲ್ಪ ಹೆಚ್ಚಾಯಿತೆಂದು ಟೀಕಿಸಿದೆ. 'ಅದು ಹೇಗೆ ಸ್ವಾಮಿ ಹೆಚ್ಚು? ಬನ್ನಿ, ಇಲ್ಲಿ ಕುಳಿತು ಮಾತನಾಡೋಣ' ಎಂದು ಹೇಳಿ ಸುಮಾರು ಒಂದು ಗಂಟೆ ಹಸ್ತಪ್ರತಿಯಿಂದ ಹಿಡಿದು ಮಾರಾಟದವರೆಗೆ ಆಗುವ ಎಲ್ಲ ವೆಚ್ಚಗಳ ವಿವರಗಳನ್ನು ನೀಡಿದರು. ಅವುಗಳಲ್ಲಿ ವಿಶೇಷವಾಗಿ ನನ್ನ ಗಮನ ಸೆಳೆದದ್ದು ಕರಡು ತಿದ್ದುವುದಕ್ಕಾಗಿ ಮುದ್ರಣಾಲಯಕ್ಕೆ ತಿರುಗುವ ವೆಚ್ಚ ಮತ್ತು ಬ್ಯಾಂಕಿನಿಂದ ತಂದ ಸಾಲಕ್ಕೆ

ಸಲ್ಲಿಸುವ ಬಡ್ಡಿ–ಇವನ್ನು ಸೇರಿಸಿದ್ದರು.

ಅನಂತರ ಅವರು ಒಂದೆರಡು ಪುಸ್ತಕಗಳನ್ನು ೧೦ ಪಾಯಿಂಟ್ ಅಕ್ಷರಗಳಲ್ಲಿ ಮುದ್ರಿಸಿದ್ದರು. 'ಅಷ್ಟು ಸಣ್ಣ ಅಕ್ಷರ ಕಣ್ಣಿಗೆ ತ್ರಾಸವಲ್ಲವೆ?' ಎಂದೆ ನಾನು. ಅವರಿಂದ ತಕ್ಷಣ ಉತ್ತರ ರೂಪದ ಪ್ರಶ್ನೆ ಹೊರಟಿತ್ತು: 'ನೀವು ಇಂಗ್ಲಿಷ್ ಪುಸ್ತಕಗಳನ್ನ ೧೦ ಪಾಯಿಂಟ್ ಅಕ್ಷರಗಳಲ್ಲೇ ಅಲ್ಲವೆ ಓದುವುದು?'

ಅವರ ವ್ಯವಹಾರದ ಜಾಣ್ಮೆಗೆ ಮತ್ತೊಂದು ನಿದರ್ಶನವೆಂದರೆ ಅವರು ಸಾಮಾನ್ಯವಾಗಿ ಒಂದು ಪುಟದಲ್ಲಿ ಹಾಕುತ್ತಿದ್ದ ೨೭ ಸಾಲುಗಳ ಬದಲಿಗೆ ಹತ್ತಿರ ಹತ್ತಿರ ೩೦–೩೨ ಸಾಲು ಗಳವರೆಗೂ ಹಾಕಿಸುತ್ತಿದ್ದುದು. ಸಾಲುಸಾಲಿನ ನಡುವಣ ಅಂತರ ಕಡಮೆಯಾದಷ್ಟೂ ಮುದ್ರಕರಿಗೆ ಸಾಕಷ್ಟು ತೊಂದರೆಯಾಗುತ್ತಿದ್ದರೂ ಅವರು ಕಾಗದದ ವೆಚ್ಚ ಕಡಿಮೆಗೊಳಿಸುವ ದೃಷ್ಟಿಯಿಂದ ಹಾಗೆ ಮಾಡುತ್ತಿದ್ದರು. ಆ ಕಾರಣದಿಂದಲೇ ಪುಟಗಳ ಮಾರ್ಜಿನ್ ಕಡಮೆ ಇರುವುದರ ಬಗೆಗೂ ಅವರದು ಬಿಗಿಹಿಡಿತ.

ಮುಂದೊಮ್ಮೆ ನಾವು ಖ್ಯಾತ ಹಾಸ್ಯ ಲೇಖಕಿ ಶ್ರೀಮತಿ ಟಿ. ಸುನಂದಮ್ಮನವರಿಗೆ 'ಸುನಂದಾಭಿನಂದನ' ಎಂಬ ಸಂಭಾವನಾ ಗ್ರಂಥವನ್ನು ಅರ್ಪಿಸಬೇಕೆಂದು ತೀರ್ಮಾನಿಸಿ ಅದರ ಪ್ರಕಟಣೆಯ ಹೊರೆಯನ್ನು ನಾವೇ ಹೊರಲು ಸಿದ್ಧವಾಗುತ್ತಿದ್ದಾಗ ಶ್ರೀ ಗೋವಿಂದರಾಯರು ಒಂದು ಸೂಚನೆ ನಮ್ಮ ಮುಂದಿಟ್ಟರು: ಪುಸ್ತಕದ ಪ್ರಕಾಶನದ ಹೊಣೆ ಅವರದು; ಆದರೆ ಪ್ರಕಟಣೆಗೆ ಸ್ವಲ್ಪ ಹಣಕಾಸಿನ ನೆರವು ನಮ್ಮದು. ಪ್ರಕಟಣಾ ನಂತರ ಈ ಹಣ ಹಿಂದಿರುಗಿಸುವ ವಾಗ್ದಾನ. ಆ ಸಂದರ್ಭದಲ್ಲಿ ಸಂಪಾದಕರುಗಳಾದ ಶ್ರೀಮತಿ ಎಚ್.ಎಸ್. ಪಾರ್ವತಿ ಮತ್ತು ನಾನು ಜಯನಗರದ ಎರಡನೇ ಬ್ಲಾಕಿನಲ್ಲಿದ್ದ ಅವರ ಮನೆಗೆ ಅನೇಕ ಸಲ ಹೋಗಿ ಬರುವುದು ಅನಿವಾರ್ಯವಾಯಿತು.

ಮೊದಲ ಸಲ ಅವರ ಮನೆಗೆ ಹೋದಾಗ ನಮ್ಮನ್ನು 'ಭಯಂಕರ'ವಾಗಿ ಸ್ವಾಗತಿಸಿದ್ದುದು ಅವರ ಸಾಕು ನಾಯಿ! ಅದನ್ನು ಗೋವಿಂದರಾಯರು ಭದ್ರಪಡಿಸಿದ ಮೇಲೇ ನಮಗೆ ಅವರ ಮನೆಯ ಪ್ರವೇಶವಾದುದು. ಅನಂತರ ಮನೆಯವರೆಲ್ಲರ ಪರಿಚಯ. ತಿಂಡಿ ತೀರ್ಥಗಳ ಉಪಚಾರ. ವಾತಾವರಣ ಎಷ್ಟೇ ಸೌಹಾರ್ದಯುತವಾಗಿದ್ದರೂ ವ್ಯವಹಾರದಲ್ಲಿ ಅವರದೇ ನಿಲುವು, ನಿರ್ಧಾರ. ಪುಸ್ತಕದ ಬೆಲೆಯನ್ನು ಕಡಮೆ ಮಾಡು ವಂತೆ ನಮ್ಮ ಜುಗ್ಗಾಟ; ಅನಂತರದ ಅವರದೇ ಲೆಕ್ಕಾಚಾರದ ಪಗಡೆಯಾಟ. ಕೊನೆಗೆ ಡೆಮ್ಮಿ ಅಷ್ಟದಳದ ೧೮೦ ಪುಟಗಳ ಪುಸ್ತಕ ವನ್ನು ಪ್ರತಿಯೊಂದಕ್ಕೆ ಒಂಬತ್ತು ರೂಪಾಯಿಗಳಂತೆ ಮಾರಾಟ ಮಾಡಲು ನಮ್ಮೊಡನೆ ಒಪ್ಪಂದ. ವ್ಯವಹಾರದಲ್ಲಿ 'ಜುಗ್ಗು' ಎನ್ನುವಷ್ಟರ ಮಟ್ಟಿಗೆ ಅವರದು ಜಿಗುಟುತನ. ಒಂದರ್ಥದಲ್ಲಿ, ಅವರು ಜಂಗಮಮೇಸ್ತ್ರಿ ಗಲ್ಲಿಯ ಸ್ಥಾವರ ಗಂಡು!

ಡಾ|| ಭೈರಪ್ಪನವರು ಬೆಂಗಳೂರಿಗೆ ಬಂದಾಗಲೆಲ್ಲ ಗೋವಿಂದರಾಯರ ಮನೆಯಲ್ಲಿಯೇ ವಾಸ್ತವ್ಯ. ಅಲ್ಲಿಯೇ ಅವರ ಪಥ್ಯಾನ್ನ ಭೋಜನ. ಭೈರಪ್ಪನವರೂ ನಾನೂ ೧೯೫೬ರಷ್ಟು ಹಿಂದೆಯೇ ಮೈಸೂರಿನ ಹೊಯ್ಸಳ ಕರ್ನಾಟಕ ಸಂಘದ ವಿದ್ಯಾರ್ಥಿ ನಿಲಯದಲ್ಲಿ 'ಸಹ ವಾಸಿಗಳು; ಅಲ್ಲಿ ಕೈ ಬರಹದ ಸಾಹಿತ್ಯ ಸಂಚಿಕೆ ತರುವಲ್ಲಿ ಸಮಶ್ರಮಿಗಳು. ಆ ಸ್ನೇಹದ

ಒಲುಮೆಯಿಂದ ಭೈರಪ್ಪನವರನ್ನು ನಮ್ಮ ಮನೆಗೆ ಒಮ್ಮೆ ಆಹ್ವಾನಿಸಿದಾಗ, 'ಗೋವಿಂದರಾಯರ ಮನೆಯಲ್ಲಿಯೇ ನನ್ನ ಬಿಡಾರ' ಎಂದರವರು. ಒಬ್ಬ ಲೇಖಕ ಮತ್ತು ಪ್ರಕಾಶಕರ ನಡುವಣ ಇಷ್ಟೊಂದು ಮಧುರ ಬಾಂಧವ್ಯ ಬಹಳ ಅಪರೂಪವೆನ್ನಬಹುದು. ನಮ್ಮ ರಾಷ್ಟ್ರಪತಿಯಾಗಿದ್ದ ಡಾ॥ ಸರ್ವೆಪಲ್ಲಿ ರಾಧಾಕೃಷ್ಣನ್ ಒಮ್ಮೆ ಇಂಗ್ಲೆಂಡಿಗೆ ಹೋಗಿದ್ದಾಗ ಅನಿರೀಕ್ಷಿತವಾಗಿ ತಮ್ಮ ಪ್ರಕಾಶಕರನ್ನು ಭೇಟಿಮಾಡುವ ಸೂಚನೆಯಿತ್ತರು. ಅದು ಪ್ರೊಟೊಕೊಲ್ ಮತ್ತು ಸೆಕ್ಯುರಿಟಿಯ ವರಿಗೆ ಸಾಕಷ್ಟು ಮುಜುಗರವುಂಟು ಮಾಡಿದ ಪ್ರಸಂಗವೂ ಇಂಥ ಬಾಂಧವ್ಯದ ಒಂದು ನಿದರ್ಶನವೆನ್ನಬಹುದು.

ನಾನು ೧೯೭೬ರಲ್ಲಿ ಕನ್ನಡ ವಿಜ್ಞಾನ ಪರಿಷತ್ತಿನ ಸಂಸ್ಥಾಪಕ ಕಾರ್ಯದರ್ಶಿಯಾದ ನಂತರ ನಮ್ಮ ಪ್ರಕಟನೆಗಳ ಮಾರಾಟಕ್ಕೆ ಶ್ರೀ ಗೋವಿಂದರಾಯರಿಂದ ಸಾಕಷ್ಟು ನೆರವು ಬಯಸಿದ್ದೆ; ಪಡೆದೆ. ಬಳೆಪೇಟೆಯ ಅವರ ಪುಸ್ತಕದಂಗಡಿಗೆ ಹೋಗುತ್ತಿದ್ದಾಗ ಕೆಲವೊಮ್ಮೆ ಅವರಿಂದ ಯಾವುದೋ ಒಂದೋ ಎರಡೋ ಪುಸ್ತಕಗಳನ್ನೂ ನನ್ನ ಸ್ವಂತ ಬಳಕೆಗಾಗಿ ತೆಗೆದುಕೊಂಡು ಬರುತ್ತಿದ್ದೆ. ಒಮ್ಮೆ ನಮ್ಮ ಲೆಕ್ಕಾಚಾರಗಳನ್ನು ವರ್ಷಾಂತ್ಯಕ್ಕೆಂದು ಚುಕ್ತಗೊಳಿಸಿದಾಗ ಅವರು ತಮ್ಮ ಫೈಲಿನಿಂದ ಹಾಳೆಯ ತುಂಡೊಂದರಲ್ಲಿ ನಾನು ಕೊಂಡೊಯ್ದಿದ್ದ ಪುಸ್ತಕಗಳ ಪಟ್ಟಿಯನ್ನು ದಾಖಲಿಸಿದ್ದುದು ನನಗೆ ಕಂಡುಬಂದಿತು. ಸುಮಾರು ಎರಡು ವರ್ಷಗಳಲ್ಲಿ ನಾನು ಕೊಂಡೊಯ್ದಿದ್ದ ಮೂರು ಪುಸ್ತಕಗಳ ಬೆಲೆ ಕೇವಲ ಹದಿನೈದು ರೂಪಾಯಿಗಳಿದ್ದಿರಬಹುದೆಂದು ನನ್ನ ನೆನಪು. ಅದಕ್ಕೆ ಸ್ವಲ್ಪ ಸೋಡಿ ಕೊಟ್ಟು ಉಳಿಕೆ ಹಣವನ್ನು ಅವರು ನನ್ನಿಂದ ಪಡೆದರು. ಆಶ್ಚರ್ಯವೆಂದರೆ, ನಾನು ಯಾವುದನ್ನು ಮರೆತಿದ್ದೆನೋ ಅದನ್ನು ಅವರು ತಮ್ಮ ಕಾಗದಗಳಲ್ಲಿ ಜೋಪಾನವಾಗಿ ದಾಖಲಿಸಿದ್ದರು. ಆದರೆ ಒಮ್ಮೆಯೂ ಆ ಹಣದ ಬಗ್ಗೆ ಅವರು ನನ್ನನ್ನು ಕೇಳಿರಲೇ ಇಲ್ಲ.

ಗೋವಿಂದರಾಯರು ಸಾರಾಸಗಟಿನ ಪುಸ್ತಕ ವ್ಯವಹಾರಕ್ಕೆ ತೊಡಗಿದ್ದಿರಲಾರರು. ಅಲ್ಪ ಕಾಲದಲ್ಲಿಯೇ ಐಶ್ವರ್ಯ ರೂಢಿಸಿಕೊಳ್ಳುವ ಆಶೆಬುರುಕತನವೂ ಅವರದಾಗಿರಲಿಲ್ಲ. ಪುಸ್ತಕ ಪ್ರಕಟಣೆ, ಮಾರಾಟ ಅವರ ಬದುಕಿಗೆ ನೆರವಾಗಿ ಬಂದ ಒಂದು ಉದ್ಯಮ, ವ್ರತ.

## ಶ್ರೀ ಶಾ.ಮಂ. ಕೃಷ್ಣರಾಯ, ಗೋವಾ

೧೯೬೧ರಲ್ಲಿ ನನ್ನ ಮೊದಲ ಪೌರಾಣಿಕ ನಾಟಕ 'ರಾಜಧರ್ಮ' ಪ್ರಕಟವಾಯಿತು. ಕ್ಷಮಿಸಿ, ಅದು ತಾನಾಗಿಯೇ ಪ್ರಕಟವಾಗಲಿಲ್ಲ. ನಾನೇ ಅದನ್ನು ಪ್ರಕಟಿಸಿದೆ. ಪ್ರಕಟಿಸಿ ಮನೆಯಲ್ಲಿಟ್ಟುಕೊಂಡು ಕುಳಿತುಕೊಳ್ಳಲು ಆಗುತ್ತದೆಯೇ? ಅದನ್ನು ಮಾರಾಟ ಮಾಡಬೇಕು. ಅದನ್ನು ಯಾರು ಮಾರಾಟ ಮಾಡಬೇಕು? ನಾನೇ ಮಾಡಬೇಕು. ನನಗಾಗ ಪ್ರಾಯ ೧೯. ನಾನೇ ನನ್ನ ಪುಸ್ತಕ ತುಂಬಿಕೊಂಡು ಪುಸ್ತಕದಂಗಡಿ ಹುಡುಕಿಕೊಂಡು ಹೊರಟೆ.

ನನ್ನದು ಮೂರಂಕಿನ ನಾಟಕ. ಅದು ಏಕಾದಶಿಯ ಮಹಾತ್ಮೆ ಹೇಳುವಂತಹ ರುಕ್ಮಾಂಗದ ಚರಿತ್ರೆಯನ್ನು ಆಧರಿಸಿದ ನಾಟಕ. ಹಾಡುಗಳು, ಹಾಸ್ಯ, ದುಃಖ, ನೋವು, ನಲಿವು–ನವರಸ

ಗಳಿಂದ ತುಂಬಿದ ನಾಟಕ. ಓದಿದವರೆಲ್ಲ ಶಹಬ್ಬಾಸ್ ಎಂದು ಬೆನ್ನು ತಟ್ಟಿದ್ದರು. 'ಇಂಥ ಅಪೂರ್ವ ಕೃತಿ ಹಿಂದಿನವರು ಯಾರೂ ಬರೆಯಲಿಲ್ಲ. ಇಂಥ ದೊಡ್ಡ ಸಾಹಸ ಮಾಡಿದ್ದೀರಿ. ಇಂಥ ಸಾಹಸ ಕೋಲಂಬಸನೂ ಮಾಡಿಲ್ಲ' ಎಂಬಂತೆ ಮಿತ್ರರೆಲ್ಲ ಹುರಿದುಂಬಿಸಿದ್ದರು. ಆಗ ನನ್ನ ತಲೆ ಹನ್ನೆರಡಾಣೆ! ನಾನೇ ಕಾಳಿದಾಸ! ನಾನೇ ಭವಭೂತಿ!! ನಾನೇ ಭಾಸ!!! ಎಂದು ನನ್ನಷ್ಟಕ್ಕೆ ಬೀಗಿ ಓಡಾಡತೊಡಗಿದ್ದೆ. ಕಲ್ಲು ಗುದ್ದಿ ನೀರು ಹೊರಡಿಸಬಲ್ಲೆ ಎಂಬ ಮೊಂಡು ಧೈರ್ಯ. ಇಂಥ ದಿನಗಳಲ್ಲಿ ನನ್ನ ಪುಸ್ತಕಗಳ ಗಂಟು ತೆಗೆದುಕೊಂಡು ನಾನು ಹುಬ್ಬಳಿಯ 'ಸಾಹಿತ್ಯ ಭಂಡಾರಕ್ಕೆ ಹೋದೆ.

ಕುರ್ಚಿಯಲ್ಲಿ ಓರ್ವ ತೆಳ್ಳನೆಯ ವ್ಯಕ್ತಿ ಪುಸ್ತಕ ಓದುವುದರಲ್ಲಿ ಮಗ್ನ. ಅವರ ಕುರ್ಚಿಗೆ ಸರಿಯಾಗಿ ಮೇಲ್ಗಡೆ ಗೋಡೆಗೆ ಶಿವರಾಮ ಕಾರಂತರ ಭಾವಚಿತ್ರ ತೂಗುಬಿದ್ದಿತ್ತು.

ನಾನು ಧೈರ್ಯವಾಗಿ 'ಸಮಸ್ಕಾರ' ಎಂದೆ.

ಆ ವ್ಯಕ್ತಿ ತಲೆಯೆತ್ತಿ ನಮಸ್ಕಾರ ಹೇಳಿ 'ಏನು ಬೇಕಾಗಿತ್ತು?' ಎಂದು ಕೇಳಿದರು.

ನಾನು, 'ನನ್ನ ಪುಸ್ತಕ ಮಾರಲಿಕ್ಕೆ ಬಂದಿದ್ದೆ' ಅಂದೆ.

'ಯಾವ ಪುಸ್ತಕ?' ಅಂದರು.

'ರಾಜಧರ್ಮ'-ಮುಂತಾಗಿ ಆರಂಭಿಸಿ ಸಂಪೂರ್ಣ ಕಥಾಭಾಗ ಹೇಳಿ, 'ಸ್ನೇಹಿತರೆಲ್ಲ ತುಂಬ ಚೆನ್ನಾಗಿದೆ ಪ್ರಕಟಿಸಿ ಎಂದಿದ್ದರಿಂದ ಪ್ರಕಟಿಸಿದ್ದೇನೆ' ಎಂದೆ.

'ಹೌದು ಎಲ್ಲರೂ ಹಾಗೆ ಹೇಳ್ತಾರೆ. ಆದರೆ ಕೊಳ್ಳುವಾಗ ಮುಖ ಸಿಂಡರಿಸುತ್ತಾರೆ. ನೀವು ಹೊಸಬರು. ನಿಮಗಿದೆಲ್ಲ ಗೊತ್ತಾಗೊಲ್ಲ. ಪಾಪ ನೀವು ಪುಸ್ತಕ ಪ್ರಕಟಿಸಿಬಿಟ್ಟಿರಿ.'

ನಾನೇನೋ ಅಪರಾಧ ಮಾಡಿದಂತೆ ಅನಿಸಿತು.

'ನಿಮಗೆಷ್ಟು ಪುಸ್ತಕ ಕೊಡಲಿ?' ಎಂದೆ.

'ನನಗೆ ಒಂದೂ ಬೇಡ. ಇಲ್ಲಿ ಹೊಸ ಲೇಖಕರ ಪುಸ್ತಕ ಯಾರೂ ಕೇಳೋದಿಲ್ಲ. ಕೇಳಿದ್ರೆ ನಿಮ್ಮ ವಿಳಾಸ ನನ್ನ ಹತ್ತಿರ ಇಟ್ಟಿರಿ. ನಾನೇ ಬರೆದು ತರಿಸಿಕೊಳ್ಳುತ್ತೇನೆ' ಎಂದರು.

'ನೀವು ಒಂದು ನೂರು ಪ್ರತಿಗಳನ್ನಾದರೂ...'

'ನೂರೂ ಬೇಡ, ಮೂರೂ ಬೇಡ...'

'ದುಡ್ಡು ಆಮೇಲೆ ಕೊಡಿ, ನಿಮ್ಮಲ್ಲಿ ಪುಸ್ತಕ ಇದೆಯೆಂದ್ರೆ ನನಗೊಂದು ಹೆಮ್ಮೆ' ಎಂದೆ. ಕಾರಣ ತಂದ ಪುಸ್ತಕಗಳ ಭಾರ ಮತ್ತೆ ಮರಳಿ ಹೊತ್ತುಕೊಂಡು ಹೋದರೆ ಸ್ನೇಹಿತರು ಚಪ್ಪಾಳೆ ತಟ್ಟಿ ನಗುತ್ತಾರೆ. ಸ್ವಲ್ಪ ಭಾರವಾದರೂ ಕಡಿಮೆಯಾಗಲಿ ಎಂದು ಆ ಮಾತು ಹೇಳಿದ್ದೆ. ಅಲ್ಲದೆ ಇನ್ನೊಬ್ಬ ಪುಸ್ತಕ ವ್ಯಾಪಾರಿಗಳು '೧೦ ಪುಸ್ತಕಗಳನ್ನು ಇಟ್ಟು ಹೋಗಿ ಮಾರಾಟವಾದ ಮೇಲೆ ಹಣ ಕೊಡುತ್ತೇವೆ' ಎಂದಿದ್ದರು. ಹಾಗೆಯೇ ಇವರು ೧೦-೨೦ ಇಟ್ಟುಕೊಂಡರೆ ಮರಳಿ ಹೊತ್ತುಕೊಂಡು ಹೋಗುವ ಕಷ್ಟವಾದರೂ ಕಡಿಮೆಯಾಗಬಹುದು ಎಂದು ಹೇಳಿದ್ದೆ. ಆದರೆ ಆ ವ್ಯಕ್ತಿ ಸುತರಾಂ ಇಟ್ಟುಕೊಳ್ಳಲು ಒಪ್ಪಲಿಲ್ಲ. ನನಗೆ ಆಗ ಅವರನ್ನು ನುಂಗಿಬಿಡುವಷ್ಟು ಸಿಟ್ಟು ಬಂದಿತ್ತು. ಆದರೆ ಏನು ಮಾಡಲಿ?

'ನಿಮ್ಮ ಹೆಸರೇನು ಹೇಳ್ತೀರಾ?' ಅಂದೆ.

'ನಾನು ಎಂ. ಗೋವಿಂದರಾಯ' ಎಂದರು.

ಅವರೇ 'ಸಾಹಿತ್ಯ ಭಂಡಾರ'ದ ಒಡೆಯರು ಎಂದು ನನಗೆ ಗೊತ್ತಿತ್ತು. ಕಾರಣ ನಾನು ಶಾಲೆಯಲ್ಲಿ ಓದುತ್ತಿದ್ದ ದಿನಗಳಿಂದಲೂ ಅವರಿಗೆ ಪತ್ರ ಬರೆದು ಪುಸ್ತಕವನ್ನು ಅಂಚೆಯಿಂದ ತರಿಸಿಕೊಳ್ಳುತ್ತಿದ್ದೆ. ಆದ್ದರಿಂದ ಗೋವಿಂದರಾಯರ ಪರಿಚಯ ಮೊದಲಿನಿಂದಲೂ ನನಗೆ ಇತ್ತು. ಮನಸ್ಸಿನಲ್ಲಿ ಕುಪಿತಗೊಂಡು ನಾನು ಮೂಟೆ ಹೆಗಲಿಗೆ ಏರಿಸಿಕೊಂಡು ಬಂದೆ. ಅನಂತರ ಅವರ ಅಂಗಡಿಯ ಕಡೆ ಹಾಯಲಿಲ್ಲ.

ಸುಮಾರು ೪-೫ ತಿಂಗಳು ಕಳೆದಿರಬಹುದು. ನನಗೆ ಗೋವಿಂದರಾಯರಿಂದ ಒಂದು ಕಾರ್ಡು ಬಂತು. 'ನಿಮ್ಮ 'ರಾಜಧರ್ಮ'ದ ೫ ಪ್ರತಿ ಕಳಿಸಿ.'

ಕಳಿಸಿದೆ. ಕೆಲವೇ ದಿನಗಳಲ್ಲಿ ಹಣವೂ ಬಂತು.

ಅನಂತರ ನಾನು ಹುಬ್ಬಳ್ಳಿಗೆ ಹೋದಾಗಲೆಲ್ಲ ಅವರನ್ನು ಕಾಣುತ್ತಿದ್ದೆ. ಪರಿಚಯ ಗಾಢವಾಯಿತು. ನನಗೆ ಪ್ರಕಾಶನ ವ್ಯವಹಾರದ ಅನೇಕ ಮಾಹಿತಿ ಒದಗಿಸಿದರು. ಪುಸ್ತಕ ಪ್ರಕಾಶನದ ಕಷ್ಟನಷ್ಟ ಹೇಳಿಕೊಂಡರು. ಒಂದೆರಡು ಬಾರಿ ಮನೆಗೂ ಕರೆದುಕೊಂಡು ಹೋದರು. ನಾವೆಷ್ಟು ಆತ್ಮೀಯರಾದೆವೆಂದರೆ ಅವರದು ಕಲ್ಲು ಹೃದಯವಲ್ಲವೆಂದು ತಿಳಿಯಿತು. ಅವರಲ್ಲಿ ಮಾನವೀಯ ಸ್ಪಂದನವಿತ್ತು. ಜೊತೆಗೆ ವ್ಯವಹಾರ ಕುಶಲರಾಗಿದ್ದರು.

ನಾನು 'ರಸಚೇತನ' ಪ್ರಕಟಿಸಿದಾಗ ಮುಕ್ತಕಂಠದಿಂದ ಪ್ರಶಂಸಿಸದರಲ್ಲದೆ ಮೊದಲ ಬಾರಿಗೆ ೫೦ ಪ್ರತಿಗಳನ್ನು ಖರೀದಿಸಿ ಪ್ರೋತ್ಸಾಹಿಸಿದ್ದರು. ಮುಂದೆ ಅವರು ನನ್ನ ಎಲ್ಲ ಪುಸ್ತಕಗಳ ನೂರಾರು ಪ್ರತಿ ಕೊಂಡರು. ಹೇಳಿದ ದಿನ ಹಣ ಕೊಟ್ಟರು. ಒಂದು ಬಿಡಿಗಾಸೂ ಕಡಿಮೆ ಮಾಡದೆ ಕೊಡಬೇಕಾದ ಬಿಡಿಪೈಸೆಗಳನ್ನೂ ಕೈಯಲ್ಲಿ ತುರುಕುತ್ತಿದ್ದರು.

ನನಗೆ ಅವರೊಂದಿಗೆ ಮಾತನಾಡಬೇಕೆಂದರೆ ಖುಷಿ. ಆಗಿನ್ನೂ ಅವರು ಭೈರಪ್ಪನವರ ಪುಸ್ತಕ ಪ್ರಕಟನೆ ಕೈಗೆತ್ತಿಕೊಂಡಿರಲಿಲ್ಲ. ಪುಸ್ತಕ ಪ್ರಕಾಶರಾಗುವ ಎಲ್ಲ ಯೋಗ್ಯತೆ ಅವರಲ್ಲಿತ್ತು. ಯಾವುದೋ ಪುಸ್ತಕದ ಗಾತ್ರ, ಲೇಖಕನ ಖ್ಯಾತಿ ಇವಷ್ಟನ್ನೇ ನೋಡಿ ಪ್ರಕಟಣೆಗೆ ತೆಗೆದು ಕೊಳ್ಳುತ್ತಿರಲಿಲ್ಲ. ಹಸ್ತಪ್ರತಿಯನ್ನು ಏಕಾಂತದಲ್ಲಿ ಕುಳಿತು ಓದುತ್ತಿದ್ದರು. ಬದಲಾವಣೆ ಬೇಕಿದ್ದರೆ ಸೂಚಿಸುತ್ತಿದ್ದರು. 'ಸಾಹಿತ್ಯ ಭಂಡಾರ'ದ ಪ್ರಕಟನೆಗೆ ಯೋಗ್ಯವೆನಿಸದಿದ್ದರೆ ಅದನ್ನು ನಿರ್ದಾಕ್ಷಿಣ್ಯ ವಾಗಿ ಮರಳಿ ಕೊಡುತ್ತಿದ್ದರು. ಮುದ್ರಣದಲ್ಲಿ ತುಂಬ ಅಚ್ಚುಕಟ್ಟು. ಉತ್ತಮ ಬಗೆಯ ಕಾಗದ ಉಪಯೋಗಿಸುವುದು. ಅಚ್ಚುಕಟ್ಟಾಗಿ ಮುದ್ರಿಸುವ, ಯೋಗ್ಯ ಮುದ್ರಣ ಬೆಲೆ ಇರುವ ಪ್ರೆಸ್ಸಿಗೆ ಕೊಡುತ್ತಿದ್ದರು. ಅವರ ಅನೇಕ ಪುಸ್ತಕಗಳನ್ನು ಮುದ್ರಿಸಿದ ಒಬ್ಬ ಕಂಪೋಸಿಟರ್ ನನಗೆ ಬೆಂಗಳೂರಿನಲ್ಲಿ ಹೇಳಿದ್ದ, 'ಯಾರ ಹತ್ತಿರ ಬೇಕಾದರೂ ಕೆಲಸ ಮಾಡಬಹುದು ಸಾಹಿತ್ಯ ಭಂಡಾರದ ಗೋವಿಂದರಾಯರ ಹತ್ತಿರ ಅಲ್ಲ. ಅವರು ಬಯಸಿದ ಟೈಪ್‌ಗಳನ್ನೇ ಉಪಯೋಗಿಸ ಬೇಕು. ಇಡೀ ಪುಟದಲ್ಲಿ ಒಂದೇ ಒಂದು ಬೇರೆ ಟೈಪ್ ಬಿದ್ದರೂ ತಕ್ಷಣ ಕಂಡುಹಿಡಿದು ತೆಗೆಸುತ್ತಿದ್ದರು. ಒಂದು ಪುಟದಲ್ಲಿ ೩೦-೩೨ ಸಾಲು ಕಟ್ಟುನಿಟ್ಟಾಗಿ ಕೂಡಲೇಬೇಕು. ಮಧ್ಯ ಸ್ಪೇಸ್ ಬಿಡುವಾಗಲೂ ಇಂತಿಷ್ಟೇ ಬಿಡಬೇಕೆಂಬ ನಿಯಮ, ಪ್ರಶ್ನೋತ್ತರಗಳಿಂದ ಪುಟ ತುಂಬುವ ಲೇಖಕರನ್ನು ಒಪ್ಪುತ್ತಿರಲಿಲ್ಲ. ಎಲ್ಲ ಸಂಭಾಷಣೆಗಳು ಪ್ಯಾರಾಗ್ರಾಫ್‌ನಲ್ಲಿ ಸೇರಬೇಕು. ಪ್ರತಿಯೊಂದು

ಪುಟದ ಚೌಕಟ್ಟು ಅಷ್ಟಷ್ಟೇ ಇರಬೇಕು. ಪುಸ್ತಕಗಳ ಬೈಂಡಿಂಗ್‌ನಲ್ಲೂ ಅಷ್ಟೇ ಕಾಳಜಿ. ಎಲ್ಲಾ ಅಚ್ಚುಕಟ್ಟು, ತಪ್ಪಿದರೆ ಮತ್ತೆ ಮತ್ತೆ ಹೇಳಿ ಸರಿಮಾಡಿಸುತ್ತಿದ್ದರು. ಅವರ ಕಣ್ಣಿನಿಂದ ಒಂದು ಸಣ್ಣ ತಪ್ಪು ಜಾರಿ ಉಳಿಯುತ್ತಿರಲಿಲ್ಲ. ಪ್ರೆಸ್ಸಿಗೂ ಅಷ್ಟೇ, ಹೇಳಿದ ಸಮಯಕ್ಕೆ ಹಾಜರು. ಬರುವ ಮೊದಲೇ ಪ್ರೂಫ್ ರೆಡಿ ಇರಬೇಕು. ಅದನ್ನು ಬಿಟ್ಟುಬಿಡದೆ ಸರಿಪಡಿಸಿದಾಗಲೇ ಅವರಿಗೆ ಸಮಾಧಾನ, ಮುದ್ರಣದಲ್ಲಿ ಅಶಿಸ್ತು, ಬೈಂಡಿಂಗ್‌ನಲ್ಲಿ ಬೇಜವಾಬ್ದಾರಿತನ ಖಂಡಿತ ಒಪ್ಪುತ್ತಿರಲಿಲ್ಲ. ಅವರ ಕೆಲಸ ಮಾಡುವುದೆಂದರೆ ತಲೆನೋವು. ಆದರೆ ನಮಗೂ ಅವರಿಂದ ತರಬೇತಿ ಸಿಗುತ್ತಿತ್ತು. ನನಗಂತೂ ಗೋವಿಂದರಾಯರು ತುಂಬಾ ಕಲಿಸಿದ್ದಾರೆ' ಎನ್ನುತ್ತಿದ್ದ.

ಪುಸ್ತಕ ಪ್ರಕಟನೆಯ ವಿಷಯದಲ್ಲಿ ಅವರದು ಸ್ಪಷ್ಟವಾದ ನಿಲುವು: 'ಜನ ದುಡ್ಡು ಕೊಟ್ಟು ಪುಸ್ತಕ ಕೊಳ್ಳುತ್ತಾರೆ. ಅವರ ದುಡ್ಡಿಗೆ ಮೋಸವಾಗಬಾರದು. ಅವರು ಕೊಂಡು ಮುದ್ರಣ ಸರಿಯಿಲ್ಲ, ಬೈಂಡ್ ಸರಿಯಿಲ್ಲ, ವಿಷಯ ಚೆನ್ನಾಗಿಲ್ಲ ಎಂದು ಹಳಹಳಿಸಬಾರದು. ಓದುಗನಿಗೆ ಅನ್ಯಾಯವಾಗಬಾರದು.'

ಈ ಮಾತು ಗೋವಿಂದರಾಯರು ಪದೇ ಪದೇ ಹೇಳುತ್ತಿದ್ದರು. ನನ್ನಂಥವನು ಪುಸ್ತಕ ಪ್ರಕಟನಾ ವ್ಯವಹಾರಕ್ಕೆ ಕೈ ಹಾಕುವುದಾದರೆ ಹತ್ತಿರ ಕೂಡಿಸಿಕೊಂಡು ಆತ್ಮೀಯವಾಗಿ ಪ್ರಕಾಶನ ಪ್ರಪಂಚದ ಒಳಹೊರಗುಗಳನ್ನು ಬಿಚ್ಚಿಟ್ಟು ಕಿವಿಮಾತು ಹೇಳುತ್ತಿದ್ದರು.

ಗೋವಿಂದರಾಯರಿಗೆ ಓದುವ ಚಟವಿತ್ತು. ಒಳ್ಳೆಯದನ್ನು ಓದಿ ನಾಲ್ಕು ಜನರಿಗೆ ಓದುವಂತೆ ಹುರಿದುಂಬಿಸುತ್ತಿದ್ದರು. ಅವರೊಬ್ಬ ನಿಜವಾದ ವಿಮರ್ಶಕ. ಕೃತಿಯನ್ನು ಸ್ಪಷ್ಟವಾಗಿ ವಿಮರ್ಶಿಸಿ, ಕೆಟ್ಟ ಬರವಣಿಗೆಯನ್ನು ಖಂಡಿಸುತ್ತಿದ್ದರು.

ಗೋವಿಂದರಾಯರ ಇನ್ನೊಂದು ವೈಶಿಷ್ಟ್ಯವೆಂದರೆ ತಮ್ಮ ಮಳಿಗೆಗೆ ಬಂದವರ ಮುಂದೆಲ್ಲ ವಿಮರ್ಶೆ ಮಾಡಿ, ಅವರೇನು ಬರೆಯುತ್ತಾರೆ? ಇವರೇನು ಬರೆಯುತ್ತಾರೆ? ಎನ್ನುತ್ತಿರಲಿಲ್ಲ. ಒಬ್ಬರು ಒಂದು ಪುಸ್ತಕ ಕೊಳ್ಳಲು ಬಂದರೆ ಅವರಿಗೆ ಮತ್ತಿಷ್ಟು ಪುಸ್ತಕಗಳ ಬಗ್ಗೆ ಮಾಹಿತಿ ಒದಗಿಸಿ ಅವರ ಕುತೂಹಲ ಕೆರಳಿಸುತ್ತಿದ್ದರು. ಅವರಲ್ಲಿ ಪುಸ್ತಕ ಪ್ರೀತಿ ಬೆಳೆಸುತ್ತಿದ್ದರು.

ಕೊಡಕೊಳ್ಳುವ ವ್ಯವಹಾರದಲ್ಲಿ ಗೋವಿಂದರಾಯರು ಸ್ಪಷ್ಟ ಮತವಾದಿ. ಮೊದಲೇ ತಮಗೆ ನ್ಯಾಯವಾಗಿ ಸಿಗಬೇಕಾದ ಕಮಿಷನ್ ಕೇಳಿ ಪುಸ್ತಕ ಖರೀದಿಸುತ್ತಿದ್ದರು. ಮರು ದಿನವೇ ಹಣ ಕೊಟ್ಟುಬಿಡುತ್ತಿದ್ದರು. 'ನಾಳೆ ಬಾ' ಎಂದು ಅವರು ಹೇಳಿದ್ದು ನನಗೆ ನೆನಪಿಲ್ಲ. ಕಾರಣ ನನ್ನಂಥ ಒಬ್ಬ ವ್ಯಕ್ತಿ ಹೊರನಾಡಿನಲ್ಲಿ ನಿಂತು ಪುಸ್ತಕ ಪ್ರಕಟಿಸುವುದು, ಅದನ್ನು ಮಾರುವುದು, ಹಣ ತೊಡಗಿಸಿ ಒದ್ದಾಡುವ ತೊಂದರೆ ಅವರಿಗೆ ಗೊತ್ತಿತ್ತು. ಅನೇಕರು ನನ್ನ ಈ ಕಷ್ಟ ನೋಡಿ ಮೊಸಳೆ ಕಣ್ಣೀರು ಸುರಿಸಿದ್ದಾರೆ. ಆದರೆ ಗೋವಿಂದರಾಯರು ಮಾತ್ರ ಯಾವ ಸೋಗಿನ ಮಾತನ್ನಾಡದೆ ನನ್ನ ಬೆಂಗಾವಲಿಗೆ ನಿಂತು ಬೆನ್ನು ಚಪ್ಪರಿಸಿದ್ದಾರೆ. ಆದರೆ ಅಷ್ಟೇ ನಿಷ್ಠುರ ವ್ಯವಹಾರಿ. ಗೋವಿಂದರಾಯರ ಈ ನಿಷ್ಠುರ ವ್ಯವಹಾರ ಸ್ವಭಾವ ನನಗೆ ಅಚ್ಚುಮೆಚ್ಚು.

ಅವರು ಎಷ್ಟು ನಿಷ್ಠುರ ವ್ಯವಹಾರಿಯೆಂಬುದರ ಬಗೆಗೆ ನನಗೆ ಡಾ॥ ಎಸ್. ಎಲ್. ಭೈರಪ್ಪನವರು ಹೇಳಿದ ಒಂದು ಘಟನೆ ನಮೂದಿಸುತ್ತೇನೆ.

ಒಂದು ದಿನ ಗೋವಿಂದರಾಯರಿಂದ ಒಂದು ಕಾರ್ಡು ಭೈರಪ್ಪನವರಿಗೆ ಬಂತು. ಅದರಲ್ಲಿ, 'ನೀವು ಬೆಂಗಳೂರಿಗೆ ಬಂದಾಗ ನನ್ನನ್ನು ಕಂಡು ಹೋಗಿ' ಎಂದು ಬರೆದಿದ್ದರು. ನಂತರ ಬೇರೊಂದು ಕೆಲಸಕ್ಕೆ ಬಂದ ಭೈರಪ್ಪನವರು ಗೋವಿಂದರಾಯರನ್ನು ಕಂಡರು.

'ಓ ಬನ್ನಿ, ಬನ್ನಿ. ನೀವು ಬಂದದ್ದು ಒಳ್ಳೇದಾಯ್ತು.'

'ಯಾಕೆ?' ಭೈರಪ್ಪ ಕೇಳಿದರು.

'ನಿಮಗೆ ನಾನೇನಾದರೂ ಹಣ ಕೊಡುವುದುಂಟೆ?'

'ಇಲ್ಲಾಂತ ಕಾಣುತ್ತೆ. ನೆನಪಾಗೋಲ್ಲ.'

'ನಾನು ನಿಮಗೆ ಹಣ ಕೊಡಬೇಕು. ನಿಮ್ಮದೊಂದು ಮರುಮುದ್ರಣ ಹಾಕಿದ್ದೆವು. ಅದರ ಬಾಬ್ತು ನಿಮ್ಮ ಗೌರವಧನ ಸಂದಾಯವಾಗಲಿಲ್ಲ. ಇಲ್ಲಿ ನೋಡಿ ಇಷ್ಟು ಸಾವಿರ ರೂಪಾಯಿ ಕೊಡಬೇಕು.' ಎಂದು ಪಕ್ಕದಲ್ಲಿದ್ದ ಲೆಕ್ಕದ ಪುಸ್ತಕ ತೋರಿಸಿದರು.

ಅದೇನು ಸಣ್ಣ ಮೊತ್ತವಾಗಿರಲಿಲ್ಲ. ಅಂಥ ದೊಡ್ಡ ಮೊತ್ತವನ್ನು ಕೊಟ್ಟು ಖುಷಿಪಟ್ಟರಂತೆ ಗೋವಿಂದರಾಯರು!

## ಶ್ರೀ ನಿಂಗಣ್ಣ ಸಣ್ಣಕ್ಕಿ, ಗೋಕಾಕ

೧೯೬೬ರ ಏಪ್ರಿಲ್‌ನಲ್ಲಿ ಎಸ್.ಎಸ್.ಸಿ. ಮೌಲ್ಯಮಾಪನಕ್ಕಾಗಿ ಬೆಂಗಳೂರಿಗೆ ಬಂದ ಮಾರನೆಯ ದಿನ ವಿಶ್ವೇಶ್ವರಪುರದ ರಾಷ್ಟ್ರೀಯ ವಿದ್ಯಾಲಯ ಬೀದಿಯಲ್ಲಿ 'ಸಾಹಿತ್ಯ ಭಂಡಾರ' ನಾಮಫಲಕ ಕಂಡು ಸಂತೋಷವಾಗಿ ಅಲ್ಲಿಗೆ ಹೋದೆ. ತೆಳ್ಳನೆಯ ಶರೀರದ ವ್ಯಕ್ತಿಯೊಬ್ಬರನ್ನು ಕಂಡು ನಮಸ್ಕರಿಸಿದೆ. ನಗುಮೊಗದಿಂದಲೇ 'ಬನ್ನಿ' ಎಂದು, 'ಯಾವಲ್ಲಿಂದ ಬಂದಿರಿ, ಏನು ಕೆಲಸ?' ಎಂಬುದಾಗಿ ಕೇಳಿದರು. ನನ್ನ ಹೆಸರು ವೃತ್ತಿ ತಿಳಿಸಿದೆ. ಸಂತೋಷಪಟ್ಟರು. ತಮ್ಮ ಹೆಸರು ಎಂ. ಗೋವಿಂದರಾವ. 'ಎಂ' ಎಂದರೇನು? ಎಂದು ಕೇಳಿದೆ. ವಿವರಿಸಿದರು. 'ನಿಮ್ಮದು ನಿಂಗಣ್ಣ ಹೇಗೆ? ಸಣ್ಣಕ್ಕಿ ಹೇಗೆ? ಎಂದು ನಕ್ಕು ಕೇಳಿದರು. 'ನಿಂಗಪ್ಪ ಹೆಸರನ್ನು ಪ್ರೀತಿಯಿಂದ ನಿಂಗಣ್ಣ ಎಂದು ಕರೆಯುತ್ತಾರೆ' ಎಂದೆ. ಇದು ನಮ್ಮ ಮೊದಲ ಭೇಟಿ.

ಅಂದು ಸಂಜೆ ಮತ್ತೆ 'ಸಾಹಿತ್ಯ ಭಂಡಾರಕ್ಕೆ ಹೋದೆ. ನನಗೆ ಬೇಕಾದ ಕೃತಿಗಳ ಪಟ್ಟಿಯನ್ನು ನೀಡಿದೆ. ಎಲ್ಲವೂ ದೊರಕದಿದ್ದರೂ ಕೆಲವನ್ನು ಕೊಡುವುದಾಗಿ ಹೇಳಿದರು. ನನ್ನ ಬೇಡಿಕೆಯ ಕೃತಿಗಳನ್ನು ಒಂದೊಂದಾಗಿ ಹೊರ ತೆಗೆದರು. ಬರಬರುತ್ತ ನನಗೆ ಹೆದರಿಕೆಯಾಯಿತು. ಅವುಗಳಿಗೆಲ್ಲ ದುಡ್ಡು ಎಲ್ಲಿದೆ? ಆದರೂ ನಾಲ್ಕೈದು ಕೃತಿಗಳನ್ನು ಕೊಳ್ಳುವ ಮನಸ್ಸು ಮಾಡಿದೆ. 'ಇವೂ ನಿಮಗೆ ಬೇಕು. ತಕ್ಕೊಳ್ಳಿ' ಎಂದರು. 'ಎಲ್ಲವಕ್ಕೂ ಹಣದ ಕೊರತೆ' ಎಂದೆ.

'ಓಹೋ! ಸಂಕೋಚ ಬೇಡ, ನಂತರ ಕಳಿಸಿರಿ.' ಎಂದು ಅವರು ತಿಳಿಸಿದಾಗ ವಿವೇಕಾನಂದರ ಕೃತಿಶ್ರೇಣಿಯ ಕಡೆಗೆ ಕೈ ಮಾಡಿದೆ. 'ನಿಮಗೆ ಹುಬ್ಬಳ್ಳಿಯ ಸಾಹಿತ್ಯ ಭಂಡಾರಕ್ಕೆ ಕಳಿಸಿ ಮುಟ್ಟಿಸುತ್ತೇನೆ' ಎಂದರು.

'ತಮ್ಮನ್ನು ಕಂಡಾಗ ಮಾಸ್ತಿ ಮತ್ತು ವಿಶ್ವೇಶ್ವರಯ್ಯನವರನ್ನು ಕಂಡಂತಾಗುತ್ತದೆ' ಎಂದೆ.

'ಓಹೋ ಹಾಗೇನು?! ನಾನು ದೊಡ್ಡವನಲ್ಲ, ಪುಸ್ತಕ ವ್ಯಾಪಾರಿ ತಾನೇ!' ಎಂದರು.

ಗೋವಿಂದರಾಯರು ನನಗೆ ಕೇವಲ ಒಬ್ಬ ಪುಸ್ತಕ ವ್ಯಾಪಾರಿಯಾಗಿ ತೋರದೆ, ಸಾಹಿತ್ಯದಲ್ಲಿ ಅವರಿಗಿರುವ ವಿವೇಕದಲ್ಲಿ ದೊಡ್ಡದಾಗಿಯೇ ಕಂಡರು. 'ಸಾಹಿತ್ಯ ಭಂಡಾರ'ದ ಸಹವಾಸ ಎಂ. ಅನಂತಮೂರ್ತಿಯವರ ಜೊತೆಗೂ ಬೆಳೆಯಿತು. ಅದೇ ವರುಷ, ಜುಲೈ ತಿಂಗಳಲ್ಲಿ ಬೆಂಗಳೂರಿನಿಂದ ಹುಬ್ಬಳ್ಳಿಗೆ, ಹುಬ್ಬಳ್ಳಿಯಿಂದ ಧಾರವಾಡಕ್ಕೆ ಪುಸ್ತಕಗಳು ಬಂದವು. ಗೋವಿಂದರಾಯರು, 'ಸಾಧ್ಯವಾದಾಗ ಎಂ.ಓ. ಮೂಲಕ ಹಣ ಕಳಿಸಿರಿ. ಬೆಂಗಳೂರಿಗೆ ಬಂದಾಗ ಬನ್ನಿರಿ. ಬೇಕಾದ ಪುಸ್ತಕಗಳ ಬಗೆಗೆ ಕಾಗದ ಬರೆಯಿರಿ' ಎಂದು ಬರೆದಿದ್ದರು. ಮಾರನೆಯ ವರ್ಷ 'ಸಾಹಿತ್ಯ ಭಂಡಾರ'ಕ್ಕೆ ಹೋದೆ. ಒಂದು ವರುಷ ಕಳೆಯುವುದರಲ್ಲಿ ಎಲ್ಲ ಹಣವನ್ನೂ ಹಿಂದಿರುಗಿಸಿಯಾಗಿತ್ತು. 'ನಿಮ್ಮ ಕಲಿಸುವಿಕೆ, ಕಲಿಯುವಿಕೆ ಸಾಗಲಿ' ಎಂದು ತಿಳಿಸಿದರು.

ಯಾರಿಗಾದರೂ ಪುಸ್ತಕಗಳು ಬೇಕಾದಲ್ಲಿ ತಾವೇ ಹೋಗಿ ಕೊಟ್ಟು ಬರುವ ಸಜ್ಜನಿಕೆಯನ್ನು ಅವರು ತಿಳಿಸಿದ ನೂರಾರು ಘಟನೆಗಳಿವೆ. ಪುಸ್ತಕಗಳನ್ನು ಹೊತ್ತು ಮಾರುವ ಕಾಲ ಅವರದ್ದಾಗಿತ್ತು. 'ನಾವು ಹೇಗೋ ಹೊತ್ತು ಮಾರಬಹುದು. ಗಳಗನಾಥರ ಕೆಲಸವನ್ನು ನೀವು ನೋಡಬೇಕಾಗಿತ್ತು. ಗಳಗನಾಥರ ಧೈರ್ಯ ನಮಗೂ ಬೇಕು' ಎಂದು ೧೯೭೦ರ ಸುಮಾರಿಗೂ ತಿಳಿಸಿದ ನೆನಪಿದೆ.

ನಾನು ಸಂಶೋಧನೆಗೆ ಕೈ ಹಾಕಿದ್ದನ್ನು ಆಗಲೇ ತಿಳಿಸಿದ್ದೆ. ಕನ್ನಡದ ಲಾವಣಿಗಳ ಬಗೆಗಿನ ಸಂಶೋಧನೆ ಬಹುಕಷ್ಟ, ಪ್ರಕಟಿತ ಲಾವಣಿಗಳು ಸಿಗುವುದೇ ಕಡಿಮೆ. ಜನ ಪದಕ್ಕೆ ನೀವು ಕೈ ಹಾಕಿದ್ದೀರಿ. ಮೈಸೂರು ವಿಶ್ವವಿದ್ಯಾಲಯ ಕೆಲವು ಪ್ರಕಟನೆಗಳನ್ನು ತರುತ್ತಿದ್ದಾರೆ' ಎಂದು, 'ರಾಷ್ಟ್ರೀಯ ಲಾವಣಿಗಳು' ಎಂದು ಪ್ರಕಟಗೊಂಡಿದ್ದ ಒಂದೆರಡು ಪ್ರಕಟಿತ ಕೃತಿಗಳನ್ನು ನೀಡಿದರು. ಆಗ ಬೆಲೆ ಪ್ರತಿಯೊಂದಕ್ಕೆ ಆರು ಆಣೆ ಇತ್ತು. ಒಟ್ಟಿಗೆ ಒಂದು ರೂಪಾಯಿ ಕೊಟ್ಟೆ. ಬೆಲೆ ಹೆಚ್ಚಾಯಿತು ಎಂದರು. ನಾನು ಅವರಿಗೆ ಒಂದೇ ರೂಪಾಯಿ ಕೊಟ್ಟೆನಲ್ಲ ಎಂದು ಸಂಕೋಚ ಪಟ್ಟು ಮತ್ತೊಂದು ರೂಪಾಯಿ ನೀಡಿದಾಗ, ಏರು ದನಿಯಲ್ಲಿ ಮಾತನಾಡಿ 'ಹಣವೇ ಬೇಡ! ನಿಮಗೆ ಉಪಯೋಗವಾಗಲಿ' ಎಂದರು. ಅವುಗಳನ್ನು ಹಾಗೇ ಪಡೆಯದೆ ಪಂಚತಂತ್ರದ ಪುಸ್ತಕಗಳನ್ನು ಪಡೆದೆ. ಅವರು ಹಣದ ಬಗೆಗೆ ವಿಶೇಷ ಗಮನಕೊಟ್ಟು ಪಟ್ಟಿ ಮಾಡುತ್ತಿದ್ದರು. ಆದರೆ ಅಧ್ಯಯನಶಾಲಿಗೆ ತಮ್ಮ ಸಹಾಯವಾಗಲಿ ಎಂಬ ಪ್ರಥಮನ ತೋರುತ್ತಿದ್ದರು.

ಒಮ್ಮೆ ತಾವು ಹುಬ್ಬಳ್ಳಿಗೆ ಬರುವುದಾಗಿ ಕಾಗದ ಬರೆದಿದ್ದರು. ಅಂದು 'ತಮ್ಮನ್ನು ಕಾಣಲು ಬರುವೆ' ಎಂದು ಕಾಗದ ಬರೆದು ಡಿ.ಎಲ್. ನರಸಿಂಹಾಚಾರ್ಯರ ಕೃತಿಗಳಿದ್ದರೆ ತರಬೇಕೆಂದು ತಿಳಿಸಿದೆ. 'ಬನ್ನಿರಿ' ಎಂದು ಕಾಗದ ಬಂತು.

ಅಂದು ಬಹಳ ಪುಸ್ತಕಗಳನ್ನು ತರುತ್ತಾರೆಂದು ತಿಳಿದಿದ್ದ ನನಗೆ ನಿರಾಶೆಯಾಗಲಿಲ್ಲ. ಗೋವಿಂದರಾಯರು ಹಾಗೂ ಅನಂತಮೂರ್ತಿ ಅವರೊಟ್ಟಿಗೆ ಸಾಹಿತ್ಯ ಭಂಡಾರದಲ್ಲಿ ಸಾಕಷ್ಟು ವೇಳೆ ಕಳೆದೆವು. ಗೋವಿಂದರಾವ್ ಅವರು, 'ಬೆಳಗಾವಿ ಜಿಲ್ಲೆಯ ಒಬ್ಬರು ಹಣಕ್ಕಾಗಿ ಕೈ ಕೊಟ್ಟರು' ಎಂದು ಬೇಸರಪಟ್ಟಿದ್ದರು. ನಾನು ಆ ಸಾಹಿತಿಯ ಮನೆಗೆ ಹೋಗಿ ಹಣ ಕಳಿಸುವಂತೆ

ವ್ಯವಸ್ಥೆ ಮಾಡಿದ್ದೆ. ಅದನ್ನು ನೆನಪಿಸಿಕೊಂಡು 'ನಿಮಗೆ ಕೃತಜ್ಞತೆ ಸಲ್ಲಬೇಕು' ಎಂದರು. ಇನ್ನು ಮೇಲೆ ತಾವು ಹುಬ್ಬಳ್ಳಿ ಹಾಗೂ ಧಾರವಾಡ ಪುಸ್ತಕಾಲಯಗಳಲ್ಲಿ ಗ್ರಂಥಗಳನ್ನು ಕೊಳ್ಳಿರಿ ಎಂಬ ಸೂಚನೆ ನೀಡಿದರು. ನನ್ನ ಯಾವುದಾದರೂ ಒಂದು ಕೃತಿ ಪ್ರಕಟಿಸುವ ಸೂಚನೆಯನ್ನು ಅನಂತಮೂರ್ತಿ ಅವರಿಗೆ ನೀಡಿದರು. ಮುಂದೆ ಇದರಂತೆ ನನ್ನ 'ಹೇಳುವೆ ಮಜಕೂರಾ' ಪ್ರಕಟವಾಯಿತು.

ಬೆಂಗಳೂರು ಜಂಗಮಮೇಸ್ತ್ರಿ ಗಲ್ಲಿಯ 'ಸಾಹಿತ್ಯ ಭಂಡಾರ'ದಲ್ಲಿ ಈಚೆಗೆ ಐದಾರು ವರ್ಷಗಳ ಹಿಂದೆ ಆಕಸ್ಮಿಕವಾಗಿ ಗೋವಿಂದರಾಯರನ್ನು ಕಂಡೆ. ಆಗಲೂ ಅವರು ಪುಸ್ತಕ ಪ್ರಕಟಣೆಗಳ ಬಗೆಗೆ ಒಂದೇ ಸಮನೆ ದಡಬಡಿಸುತ್ತಿದ್ದರು. ತಾವು ಗಲ್ಲಾದ ಮೇಲೆ ಕುಳಿತು ಮಗನನ್ನು ಕೆಲಸದ ನಿಮಿತ್ತ ಹೊರಗೆ ಕಳಿಸಿ, 'ನೀವು ಆದರ್ಶ ಶಿಕ್ಷಕ ಪ್ರಶಸ್ತಿ ಪಡೆದದ್ದನ್ನು ಓದಿದೆ. ಸಂತೋಷ. ಕಾಲೇಜಕ್ಕೆ ಬರಲಾಗಲಿಲ್ಲವೇ?' ಎಂದು ಪ್ರಶ್ನಿಸಿದರು. ಶಿಕ್ಷಕನಾಗಿಯೇ ಮುಂದುವರಿಯುವ ಮನಸ್ಸು. ಬಂದದ್ದು 'ರಾಷ್ಟ್ರ ಪ್ರಶಸ್ತಿ' ಎಂಬುದನ್ನು ಕೇಳಿ ಎದ್ದು ಬೆನ್ನು ತಟ್ಟಿ ಶಹಬ್ಬಾಶಗಿರಿ ಹೇಳಿದರು. ಅಂದು ಅವರು ಸಂತೋಷಪಟ್ಟ ಸಂಗತಿ ನನಗೆ ಉನ್ಮಾದ ಕ್ಕೇರಿದಂತಿತ್ತು. ಒಬ್ಬ ಶ್ರೇಷ್ಠ ಪ್ರಕಾಶಕರು ಹೀಗೆ ಸಂತೋಷಪಟ್ಟದ್ದು, ನನಗೂ ಸಂತೋಷ ನೀಡಿದ್ದು ಅವಿಸ್ಮರಣೀಯ ಸಂಗತಿ.

ನಾನು ಅವರಲ್ಲಿ ಆಗ ಒಂದು ಬೇಡಿಕೆಯನ್ನಿರಿಸಿದೆ: 'ನಿಮ್ಮ ಅನುಭವಗಳನ್ನು ಬರೆ ಯಿರಿ. ಮುಂದಿನವರಿಗೆ ಮಾರ್ಗದರ್ಶನವಾಗುತ್ತದೆ' ಎಂದು.

'ಲೇಖಕರಾದವರು ಬರೆಯಬೇಕು. ಬೇರೆ ಭಾಷೆಗಳಲ್ಲಿ ಈ ತರಹದ ಸಾಹಿತ್ಯವೂ ಇದೆ ಎಂದು ಓದಿದ್ದೇನೆ' ಎಂದರು.

'ಈಗ ಪ್ರಕಾಶನದಿಂದ ಸಮಾಧಾನವೇ?' ಎಂದೆ.

'ಮಕ್ಕಳು ಸಾಗಿಸುತ್ತಾರೆ. ಅವರಿಗೂ ಓದುಗರಿಗೂ ಬಿಟ್ಟುಕೊಟ್ಟ ಮಾತಾಗಿದೆ ಈ ವೃತ್ತಿ' ಎಂದು ಸಮಾಧಾನದಿಂದ ನುಡಿದರು.

ಆಗ ಅವರು ಹೇಳಿದ ಈ ಮಾತುಗಳು ಈಗಲೂ ನೆನಪಾಗುತ್ತಿವೆ.

## ಶ್ರೀ ಸು. ರುದ್ರಮೂರ್ತಿ ಶಾಸ್ತ್ರಿ, ಬೆಂಗಳೂರು

'ಸಾಹಿತ್ಯ ಭಂಡಾರ'ದ ಶ್ರೀ ಗೋವಿಂದರಾಯರನ್ನು ನಾನು ಮೊದಲು ಭೇಟಿಯಾ ದದ್ದು ಬಹುಶಃ ೧೯೭೦ರ ಸುಮಾರಿನಲ್ಲಿರಬೇಕು. ಅವರ ಮಾತುಗಳು ಸ್ವಲ್ಪ ಖಾರವಾಗಿಯೇ ಇರುತ್ತಿದ್ದವು. ಆದರೆ ಅಂತರಾಳದಲ್ಲಿ ಕನ್ನಡ ಸಾಹಿತ್ಯ ಪ್ರೀತಿ, ಕೊಂಡು ಓದುವ ಅಭಿರುಚಿ ಜನರಲ್ಲಿ ಹೆಚ್ಚು ಬೆಳೆಯಲಿಲ್ಲವಲ್ಲಾ, ಎಂಬ ಕಳಕಳಿ ಪ್ರಧಾನವಾಗಿರುವುದು ಕ್ರಮೇಣ ನನ್ನ ಅರಿವಿಗೆ ಬಂತು. ಕನ್ನಡ ಸಾಹಿತಿಗಳಾಗಲಿ, ಓದುಗರಾಗಲಿ ಅವರ 'ಭಂಡಾರ'ಕ್ಕೆ ಒಂದೆರಡು ಸಲ ಹೋಗುವಷ್ಟರಲ್ಲಿ ವಯಸ್ಸಿನ ತಾರತಮ್ಯವಿಲ್ಲದೆ ತಮ್ಮ ಆತ್ಮೀಯ ವಲಯಕ್ಕೆ ಸೆಳೆದು ಕೊಳ್ಳುವ ದೊಡ್ಡ ಗುಣ ಗೋವಿಂದರಾಯರಲ್ಲಿತ್ತು.

ಕನ್ನಡ ಪುಸ್ತಕಗಳ ದೊಡ್ಡ ವ್ಯಾಪಾರಿಗಳು ಬೆಂಗಳೂರಿನಲ್ಲಿದ್ದಾರೆ. ಅವರಿಗೆ ಪುಸ್ತಕ ಎನ್ನುವುದು ವ್ಯಾಪಾರದ ಒಂದು ವಸ್ತು ಅಷ್ಟೇ. ಅದರ ಒಳಗಿರುವುದು ಅವರಿಗೆ ಮುಖ್ಯವಲ್ಲ. ದಿನನಿತ್ಯದ ಸರಕಿನ ಅಂಗಡಿಯಂತೆ ಯಾವುದು ಹೆಚ್ಚು ಚಲಾವಣೆಯಲ್ಲಿದೆಯೋ ಅದಕ್ಕೆ ಮಾತ್ರ ಹೆಚ್ಚಿನ ಮನ್ನಣೆ. ಉಳಿದ ಪುಸ್ತಕಗಳನ್ನು ಎಡಗೈಯಿಂದಲೂ ಮುಟ್ಟಲು ಅವರಿಗೆ ಅಳುಕು. ಆದರೆ ಗೋವಿಂದರಾಯರದು ಲಾಭವೇ ಏಕಮಾತ್ರ ಗುರಿಯಾದ ಕಟ್ಟಾ ವ್ಯಾಪಾರಿಯ ಮನೋಧರ್ಮ ವಲ್ಲ. ಹೊಸಬರದಿರಲಿ, ಹಳಬರದಿರಲಿ, ಹಳೆಯದಿರಲಿ, ಹೊಸದಿರಲಿ ಪ್ರಕಟವಾದ ಒಂದೆರಡು ಪ್ರತಿಗಳನ್ನಾದರೂ ತಮ್ಮ ಭಂಡಾರದಲ್ಲಿ–ಅದು ವರ್ಷಗಟ್ಟಲೆ ಇದ್ದಲ್ಲೇ ಕೊಳೆತರೂ ಸರಿ–ಇರಿಸುವ ಮನೋಭಾವ ಗೋವಿಂದರಾಯರಲ್ಲಿತ್ತು. ಯಾವ ಪುಸ್ತಕದ ಅಂಗಡಿಯವರು ಈಗಲೂ, ಕೆಲವು ಪ್ರಸಿದ್ಧ ಕವಿಗಳದನ್ನು ಬಿಟ್ಟರೆ, ಬೇರೆ ಯಾವ ಕವನ ಸಂಕಲನವನ್ನೂ ಕೊಳ್ಳುವುದಿರಲಿ, ಕಪಾಟಿನಲ್ಲಿ ಇಡಲೂ ಬಯಸುವುದಿಲ್ಲ. ಆದರೆ ಗೋವಿಂದರಾಯರಲ್ಲಿಗೆ ಹೋದರೆ ಅಂಥ ಹತ್ತು ಪ್ರತಿಗಳನ್ನಾದರೂ ಅವರು ಕೊಳ್ಳುತ್ತಿದ್ದರು. ಅಷ್ಟರಮಟ್ಟಿನ ಉತ್ತೇಜನವೂ ಇಲ್ಲದಿದ್ದರೆ ಬಹುಶಃ ಹೊಸಬರು ಕವನ ಸಂಕಲಗಳನ್ನು ಪ್ರಕಟಿಸುವ ಗೋಜಿಗೇ ಹೋಗು ತ್ತಿರಲಿಲ್ಲವೋ ಏನೋ? ನಾನಂತೂ ನಾನೇ ಪ್ರಕಟಿಸಿಕೊಂಡ ಅಂಥ ಹತ್ತಾರು ಪುಸ್ತಕಗಳನ್ನು ಅವರಲ್ಲಿ ಮಾರಿದ್ದೇನೆ, ಅವರ ಅನುಭವ, ಆತ್ಮೀಯತೆಗಳ ಪ್ರಯೋಜನ ಪಡೆದಿದ್ದೇನೆ. ಅವರ ಮಕ್ಕಳಲ್ಲೂ ಅದೇ ಸ್ವಭಾವ ಮನೋಧರ್ಮಗಳನ್ನು ಕಂಡು ಸಂತೋಷಪಟ್ಟಿದ್ದೇನೆ.

ಪ್ರಾಸಂಗಿಕವಾಗಿ ನನ್ನ ವೈಯಕ್ತಿಕ ವಿಷಯಗಳನ್ನು ಅವರಲ್ಲಿಗೆ ಹೋದಾಗ ಹೇಳುತ್ತಿದ್ದು ದುಂಟು. ನಾನು ಕಾಲೇಜಿನಲ್ಲಿನ ಅಧ್ಯಾಪಕ ವೃತ್ತಿಯನ್ನು ಬಿಟ್ಟದ್ದು ಅವರಿಗೆ ಗೊತ್ತಿತ್ತು. ನಂತರ ಬರವಣಿಗೆಯನ್ನೇ ವೃತ್ತಿಯನ್ನಾಗಿ ಅವಲಂಬಿಸಿದ್ದುದೂ ತಿಳಿದಿತ್ತು. ಹಲವರಂತೆ ಅವರು ಒಮ್ಮೆಯೂ 'ಇದು ಮೂರ್ಖತನ' ಎಂಬ ನಿರುತ್ತೇಜಕ ಮಾತುಗಳನ್ನಾಡಿದ್ದು ನೆನಪಿಲ್ಲ. ಜೊತೆಗೆ ನನ್ನ ಚಿಕ್ಕ ಮಗ (ಈಗ ಅವನಿಗೆ ೧೮ ವರ್ಷ) ಮೆದುಳು ಜ್ವರಕ್ಕೆ ತುತ್ತಾಗಿ ಅಂಗ ವಿಕಲನಾದದ್ದು, ಅವನಿಗಾಗಿ ನಾನು ಪಡಬಾರದ ಪಾಡು ಪಡುತ್ತಿರುವುದು ಅವರಿಗೆ ಗೊತ್ತಿತ್ತು. ಅಲ್ಲಿಗೆ ಹೋದಾಗಲೆಲ್ಲಾ ಆ ಬಗ್ಗೆ ವಿಚಾರಿಸುತ್ತಿದ್ದರು. ಒಮ್ಮೆ ತಮಗೆ ಆತ್ಮೀಯರಾದ ಆಯುರ್ವೇದ ಪರಿಣತರೂ, ಲೇಖಕರೂ ಆದ ಶ್ರೀ ಎಂ. ಗೋಪಾಲಕೃಷ್ಣರಾಯರ ಬಳಿ ತೋರಿಸುವಂತೆ ಸಲಹೆ ಮಾಡಿದ್ದರು. ಅನಂತರ ಅದರ ಫಲಿತಾಂಶವೇನಾಯಿತೆಂದು ಮತ್ತೆ ಮತ್ತೆ ವಿಚಾರಿಸುತ್ತಿದ್ದರು. ಗೋವಿಂದರಾಯರು ನನ್ನ ಮಗನ ಬಗ್ಗೆ ತೋರಿಸಿದ ಆ ಕಾಳಜಿಯನ್ನು ನಾನೆಂದೂ ಮರೆಯುವುದಿಲ್ಲ.

**ಎಂ.ಎಸ್.ಕೆ. ಪ್ರಭು,**

ಬೆಂಗಳೂರು

ಗೋವಿಂದರಾಯರು ಭೈರಪ್ಪನವರ ಮೂಲಕ ನನಗೆ ಪರಿಚಯವಾದವರು. ಮೊದಲ ಭೇಟಿಯಲ್ಲೇ ಅವರ ವ್ಯಕ್ತಿತ್ವ ನನ್ನ ಮೇಲೆ ಪ್ರಭಾವ ಬೀರಿತು. ವಯಸ್ಸಿನ ಅಂತರವನ್ನು ಸ್ವಲ್ಪವೂ ಗಣಿಸದೆ ಎಲ್ಲರನ್ನೂ ಸೌಜನ್ಯದಿಂದ ಸ್ನೇಹದಿಂದ ಆದರಿಸುವುದು ಅವರ ಸ್ವಭಾವ.

ಪುಸ್ತಕ ಪ್ರಕಾಶನದ ಉದ್ದಿಮೆಯಲ್ಲಿ ಅವರು ಸಂಪಾದಿಸಿದ ಕೀರ್ತಿ ಸಂಪೂರ್ಣವಾಗಿ ಅವರ ಶ್ರದ್ಧೆ ಶ್ರಮ ಮತ್ತು ಪ್ರಾಮಾಣಿಕತೆಗಳಿಂದ ಬಂದದ್ದು.

ಭೈರಪ್ಪನವರ 'ಸತ್ಯ ಮತ್ತು ಸೌಂದರ್ಯ' ಒಂದು ಗಂಭೀರವಾದ ಶಾಸ್ತ್ರ ಗ್ರಂಥ. ಇದರ ಪ್ರಕಟಣೆಯನ್ನು ಕೈಗೆತ್ತಿಕೊಂಡಾಗ ಭೈರಪ್ಪನವರು ದೂರ ದೇಶದಲ್ಲಿದ್ದರು. 'ಮುದ್ರಣದ ಕರಡನ್ನು ತಿದ್ದುವುದಕ್ಕೆ ಸಹಾಯ ಮಾಡುತ್ತೀರಾ?' ಎಂದು ನನ್ನನ್ನು ಕೇಳಿದರು. ಪ್ರೆಸ್ಸಿನಿಂದ ಬಂದ ಫಾರ್ಮ್‌ಗಳನ್ನು ಒಂದೆರಡು ಸಲ ಅವರೇ ಓದಿ, ತಿದ್ದಿ ಅನಂತರ ಅದನ್ನು ನನ್ನ ಜೊತೆ ಕೂತು ಓದಿ ಪರಿಷ್ಕರಿಸಿ ಮರಳಿ ಪ್ರೆಸ್‌ಗೆ ಕೊಡುತ್ತಿದ್ದರು. ನನ್ನ ಆಫೀಸಿನ ವೇಳೆಯನ್ನು ಗಮನಿಸಿ ನನ್ನ ಬಿಡುವಿನ ವೇಳೆಯಲ್ಲಿ ಮಾತ್ರ ನಾವು ಕೂಡುತ್ತಿದ್ದೆವು. ಈ ಕೆಲಸವನ್ನು ಎಷ್ಟೋ ದಿನ ಯಾವುದೋ ಹೋಟೆಲಿನ ಗದ್ದಲವಿಲ್ಲದ ಮೂಲೆಯಲ್ಲೋ, ಕಬ್ಬನ್‌ಪಾರ್ಕಿನ ಕಲ್ಲು ಬೆಂಚಿನ ಮೇಲೋ ಕೂತು ಮಾಡಿದ್ದು ನೆನಪಾಗುತ್ತದೆ. ಅವರ ದೃಷ್ಟಿಯಲ್ಲಿ ಕೆಲಸ ಮಾಡುವುದು ಮುಖ್ಯ. ಇಂತಹ ಸಂದರ್ಭಗಳಲ್ಲೇ ನನಗೆ ಅವರ ಕಾರ್ಯವಿಧಾನದ ನಿಕಟ ಪರಿಚಯವಾದದ್ದು.

ನನ್ನ 'ಬಕ' ನಾಟಕ ಸಂಗ್ರಹ ಪ್ರಕಟವಾದದ್ದು ಗೋವಿಂದರಾಯರು ಅದನ್ನು ಕೈಗೆತ್ತಿಕೊಂಡಿದ್ದರಿಂದಲೇ. ೧೯೭೫ರ ಜನವರಿ–ಫೆಬ್ರುವರಿಯಲ್ಲಿ ಬರೆದ 'ಬಕ' ದೀರ್ಘಕಾಲ ರಂಗದ ಮೇಲೆ ಪ್ರದರ್ಶನಗೊಳ್ಳುತ್ತಿದ್ದರೂ ಹಸ್ತಪ್ರತಿಯಾಗೇ ಉಳಿದಿತ್ತು. ಆ ನಾಟಕವನ್ನು ಪ್ರಥಮ ಬಾರಿಗೆ ರಂಗದ ಮೇಲೆ ಪ್ರಯೋಗಿಸಿದ ಹೆಗ್ಗೋಡಿನ ಕೆ.ವಿ. ಸುಬ್ಬಣ್ಣನವರನ್ನು ಪುಸ್ತಕ ಪ್ರಕಟಿಸಬೇಕೆಂದು ಕೇಳಿಕೊಂಡಿದ್ದೆ. ಅವರೂ ಒಪ್ಪಿದ್ದರು. ಆದರೆ ಯಾವ ಕಾರಣದಿಂದಲೋ ವರ್ಷಗಳು ಉರುಳಿದರೂ ಹಸ್ತಪ್ರತಿ ಮುದ್ರಣಾಲಯಕ್ಕೆ ಹೋಗಲಿಲ್ಲ. ನನಗೆ ಇದೊಂದು ಪುಸ್ತಕ ಪ್ರಕಟವಾಗಬೇಕೆಂದು ಬಲವಾದ ಅನಿಸಿಕೆ ಇತ್ತು. ನಾನು ಗೋವಿಂದರಾಯರನ್ನು ಕೇಳಿದೆ. ಅವರು ತಕ್ಷಣ ಒಪ್ಪಿದರು. ಮುದ್ರಣಾಲಯದವರಿಗೆ ಪುಸ್ತಕದ ವಿನ್ಯಾಸ, ಮುದ್ರಣ ಕ್ರಮ, ಆಕಾರ ಹೇಗಿರಬೇಕೆಂದು ಅವರು ವಿಶದವಾಗಿ ತಿಳಿಸಿ, ಫಾರ್ಮ್‌ಗಳು ಬರತೊಡಗಿದಾಗ ಕಣ್ಣಲ್ಲಿ ಕಣ್ಣಿಟ್ಟು ನೋಡಿ ಕೊನೆಗೆ ನಾನೊಂದು ಸಲ ನೋಡಲೆಂದು ಕರಡನ್ನು ಕೊಡುತ್ತಿದ್ದರು. ಆಮೇಲೆ ೧೯೮೧ರಲ್ಲಿ ಅವರು ನಾನು ಅನುವಾದಿಸಿದ ಯೂಜೀನ್ ಅಯನೆಸ್ಕೋನ 'ಮಹಾಪ್ರಸ್ಥಾನ' ನಾಟಕವನ್ನು ಪ್ರಕಟಿಸಿದರು. ಇದಕ್ಕೆ ಪೂರ್ವಭಾವಿಯಾಗಿ ಕಾಪಿರೈಟ್ ಪ್ರಶ್ನೆಯನ್ನು ಬಗೆಹರಿಸಬೇಕಾಯಿತು. ಮೂಲ ಕೃತಿಯ ಕರ್ತೃ, ಪ್ರಕಾಶಕರೊಂದಿಗೆ ಸಾಕಷ್ಟು ಪತ್ರ ವ್ಯವಹಾರ ಮಾಡಿ ಅನುಮತಿ ದೊರಕಿಸಿಕೊಂಡ ನಂತರವೇ ಹಸ್ತಪ್ರತಿ ಮುದ್ರಣಾಲಯಕ್ಕೆ ಹೋಯಿತು.

ಒಂದು ದಿನ ನನ್ನ ಬಳಿ ಕುಲ್‌ದೀಪ್ ನಯ್ಯಾರ್ ಅವರ 'ಜಜ್‌ಮೆಂಟ್' ಪುಸ್ತಕವಿದ್ದುದನ್ನು ಅವರು ಕಂಡರು. ಎಮರ್ಜೆನ್ಸಿ ಮುಗಿದ ಮೊದಲ ದಿನಗಳಲ್ಲಿ ಆ ಪುಸ್ತಕ ಸಾಕಷ್ಟು ಪ್ರಸಿದ್ಧಿ ಪಡೆದಿತ್ತು. ಅದನ್ನು ಕನ್ನಡಕ್ಕೆ ಅನುವಾದಿಸಲು ಅವರು ನನಗೆ ಸೂಚಿಸಿದರು. ನಾನೂ ಉತ್ಸಾಹದಿಂದಲೇ ಒಪ್ಪಿಕೊಂಡೆ. ಮೂಲ ಹಕ್ಕುದಾರರ ಅನುಮತಿಯನ್ನು ಕೈಯಲ್ಲಿಟ್ಟುಕೊಂಡೇ ಕನ್ನಡಾನುವಾದದ ಪ್ರಕಟಣೆಯ ಕೆಲಸ ಪ್ರಾರಂಭಿಸಬೇಕೆಂದು ಗೋವಿಂದರಾಯರು ಅಭಿಪ್ರಾಯಪಟ್ಟರು. ನಾನು ಮೂಲ ಪುಸ್ತಕದ ಪ್ರಕಾಶಕರ ಸಂಪರ್ಕ ಹೊಂದಿ ಅನುಮತಿಗೆ ಪ್ರಯತ್ನಿಸಿದೆ.

ಆದರೆ ವ್ಯವಹಾರ ಮುಂದೆ ತೊಡಕಾಗಿ ಪರಿಣಮಿಸಿದ್ದರಿಂದ ಅನುವಾದದ ಪ್ರಯತ್ನವನ್ನು ಕೈಬಿಡಬೇಕಾಯಿತು.

ವ್ಯವಹಾರದಲ್ಲಿ ಅಚ್ಚುಕಟ್ಟಾಗಿದ್ದ ಅವರು ಆತಿಥ್ಯದಲ್ಲಿ ಧಾರಾಳಿಯಾಗಿದ್ದರು. ಇವರ ಆತಿಥ್ಯದ ಹಿಂದೆ ವ್ಯಾಪಾರೀ ಬುದ್ಧಿ ಕಿಂಚಿತ್ತೂ ಇರಲಿಲ್ಲ. ಹೋದಾಗಲೆಲ್ಲ ತನ್ನ ಪರಿಚಯದವರ, ಸ್ನೇಹಿತರ ಯೋಗಕ್ಷೇಮವನ್ನು ತಪ್ಪದೆ ವಿಚಾರಿಸುತ್ತಿದ್ದರಲ್ಲದೆ, ಮನೆಯವರ ಯೋಗಕ್ಷೇಮವನ್ನು ತಿಳಿದುಕೊಳ್ಳುತ್ತಾ ಆತ್ಮೀಯರಾಗಿದ್ದರು. 'ನಿಮ್ಮ ತಾಯಿ ಹೇಗಿದ್ದಾರೆ? ತಮ್ಮ ಏನು ಮಾಡುತ್ತಾನೆ?' ಎಂದು ಭೇಟಿಯಾದಾಗಲೆಲ್ಲಾ ತಪ್ಪದೆ ಕೇಳುತ್ತಿದ್ದರು.

ಅವರು ತಮ್ಮಲ್ಲಿದ್ದ ನೇರ ನಡೆ ನುಡಿಗಳನ್ನು ಇತರರಲ್ಲೂ ಬಯಸುತ್ತಿದ್ದರು. ಲಾಭಕ್ಕಾಗಿ ಅವರೆಂದೂ ತತ್ತ್ವಗಳನ್ನು, ಆದರ್ಶಗಳನ್ನು ಬಿಟ್ಟುಕೊಡಲಿಲ್ಲ. ಕರ್ಮಯೋಗಿ ಎಂದರೆ ಇವರೇ ಎಂಬ ಗೌರವಭಾವನೆ ಅವರನ್ನು ನೆನೆದಾಗ ಮೂಡುತ್ತದೆ.

**ಶ್ರೀ ಸುರೇಂದ್ರ ಕೌಲಗಿ,** ಮೇಲುಕೋಟೆ

೧೯೭೭ಲನೇ ಇಸ್ವಿಯ ಮಾತು.

ಮೇಲುಕೋಟೆಯ ನಮ್ಮ ಮನೆಯ ಮುಂದೆ ಎರಡು ಜಗುಲಿಗಳಿವೆ. ಅವುಗಳ ಮುಖ ಪಶ್ಚಿಮದ ಕಡೆಗೆ. ಮುಂಭಾಗದಲ್ಲಿ ಚಿಕ್ಕ ರಸ್ತೆಯಾದ ಕಲ್ಯಾಣಿ ಬೀದಿ. ರಸ್ತೆಯ ಆಚೆ ಹೊಂದಿಕೊಂಡೇ ಹಸಿರು ಹುಲ್ಲಿನಿಂದ ಆಚ್ಛಾದಿತವಾದ ಒಂದು ಮೈದಾನ. ಯಾವ ಮರೆಯೂ ಇಲ್ಲ. ಸೂರ್ಯಾಸ್ತದ ಸಂಪೂರ್ಣ ನೋಟ ನೋಡಲು ಸಿಗುತ್ತದೆ. ಪ್ರಖರತೆ ಕಳಕೊಂಡ ಮೃದು ಹಾಗೂ ಹಿತಕರ ಸೂರ್ಯನ ಕಿರಣಗಳು ಜಗಲಿಯ ತುಂಬ ಬೆಳಕು ಹರಡಿವೆ. ಆ ಬೆಳಕಿಗೆ ಎದುರಾಗಿ ಕುಳಿತು 'ಉಪಯುಕ್ತ ಗಿಡಮೂಲಿಕೆಗಳು' ಪುಸ್ತಕದ ಪ್ರೂಫ್ ನೋಡುತ್ತ ಕುಳಿತಿದ್ದಾರೆ ಇಳಿವಯಸ್ಸಿನ, ಆದರೆ ಕ್ರಿಯಾಶೀಲತೆಯ, ಗೋವಿಂದರಾಯರು. ಕೆಂಪುಗಾರೆಯ ನೆಲದ ಮೇಲೆ ಕಾಗದ ಇಟ್ಟುಕೊಂಡು ಬಗ್ಗಿಕೊಂಡೇ ಪ್ರೂಫ್ ನೋಡುತ್ತಾರೆ. ತೆಳ್ಳಗಿನ ಶರೀರ, ಜುಬ್ಬ-ಧೋತರ ವೆಸ್ಟ್‌ಕೋಟ್. ಕತ್ತಿನಲ್ಲಿ ಉಲ್ಲನ್ ಸ್ಕಾರ್ಫ್ ಮತ್ತು ಕನ್ನಡಕ ಧರಿಸಿದ ಈ ವ್ಯಕ್ತಿ ಕರ್ನಾಟಕದ, ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಪ್ರಬುದ್ಧ ಪ್ರಕಾಶನ ಸಂಸ್ಥೆ 'ಸಾಹಿತ್ಯ ಭಂಡಾರ'ದ ಮಾಲೀಕರು ಇವರು ಎಂದು ಯಾರೂ ಊಹಿಸಲಾರರು. ಅವರು ಈ ರೀತಿ ಆ ಜಗಲಿಯ ಮೇಲೆ ಪ್ರೂಫ್ ನೋಡುತ್ತ ೩-೪ ಸಲ ಕುಳಿತುದುದನ್ನು ನೋಡಿದ ದೃಶ್ಯ ಹದಿನೇಳು ವರ್ಷಗಳ ನಂತರವೂ ನನ್ನ ಮನಸ್ಸಿನಲ್ಲಿ ಹಸಿರಾಗಿ ಇದೆ.

ಸುಪ್ರಸಿದ್ಧ ಸಾಹಿತಿ ಶ್ರೀ ಎಸ್.ಎಲ್. ಭೈರಪ್ಪನವರು ನಮ್ಮ ಜನಪದ ಸೇವಾ ಟ್ರಸ್ಟಿನ ಅಭಿಮಾನಿಗಳಲ್ಲೊಬ್ಬರು. ಅವರಿಂದ ನಮ್ಮ ಟ್ರಸ್ಟ್ ಪರಿಚಯ ಗೋವಿಂದರಾಯರಿಗೆ ಆಯಿತು. 'ಹೆಣ್ಣುಮಕ್ಕಳು ಮತ್ತು ಅಂಗವಿಕಲರಿಗಾಗಿ ಉದ್ಯೋಗಾವಕಾಶ ಕೊಡಲು ಟ್ರಸ್ಟ್ ನಡೆಸುತ್ತಿರುವ ಮುದ್ರಣಾಲಯಕ್ಕೆ ಯಾವುದಾದರೂ ಮುದ್ರಣ ಕೆಲಸ ಕೊಡಬಹುದೇ ಹೇಗೆ; ನೋಡಿ,' ಎಂದು ಭೈರಪ್ಪನವರು ಗೋವಿಂದರಾಯರಿಗೆ ತಿಳಿಸಿದ್ದರೆಂದು ತೋರುತ್ತದೆ. ಆದ್ದರಿಂದ ಗೋವಿಂದ

ರಾಯರು ತಮ್ಮ ೯೪ ವಯಸ್ಸಿನಲ್ಲಿಯೂ ಬೆಂಗಳೂರಿನಿಂದ ೧೫೦ ಕಿಲೋಮೀಟರ್ ದೂರದ ಹಳ್ಳಿಗಾಡು ಪ್ರದೇಶವಾದ ಮೇಲುಕೋಟೆಗೆ ಬಂದು ಟ್ರಸ್ಟಿನ ಚಟುವಟಿಕೆಗಳನ್ನು ನೋಡಿ, ಮುದ್ರಣಾಲಯದ ಸ್ಥಿತಿಗತಿಗಳನ್ನು ತಿಳಿದು ಬೆಂಗಳೂರಿನ 'ಆಯುರ್ವೇದ ಪ್ರತಿಷ್ಠಾನ'ದ ಸಂಸ್ಥಾಪಕರೂ, 'ದೀರ್ಘಾಯು' ಪತ್ರಿಕೆಯ ಸಂಪಾದಕರೂ ಆಗಿದ್ದ ಡಾ|| ಎಂ. ಗೋಪಾಲಕೃಷ್ಣ ರಾವ್ ಅವರು ಬರೆದ 'ಉಪಯುಕ್ತ ಗಿಡಮೂಲಿಕೆಗಳು' ಎಂಬ ಪುಸ್ತಕದ ಮುದ್ರಣ ಕೆಲಸ ಕೊಟ್ಟರು. ಆ ಕೆಲಸ ಕೊಡುವಾಗ ಅವರು ವಿಧಿಸಿದ್ದ ಕರಾರುಗಳು ಈ ರೀತಿ ಇವೆ:

(೧) ಯಾವುದೇ ಮುದ್ರಣದೋಷವಿರಕೂಡದು,

(೨) ನಿಗದಿತ ಸಮಯಕ್ಕೆ ಅನುಗುಣವಾಗಿ ಮುದ್ರಣ ಕೆಲಸ ನಡೆಯಬೇಕು ಮತ್ತು ಮುಗಿಯಬೇಕು.

ಈ ಕರಾರುಗಳಿಗೆ ಒಪ್ಪಿದ ನಂತರ ಪುಸ್ತಕದ ಮುದ್ರಣದ ಕೆಲಸ ಪ್ರಾರಂಭವಾಯಿತು. ಈ ಸಂದರ್ಭದಲ್ಲಿಯೇ ಗೋವಿಂದರಾಯರು ೩-೪ ಬಾರಿ ಮೇಲುಕೋಟೆಗೆ ಬಂದುದು.

ಅವರು ಪ್ರೂಫ್ ನೋಡುತ್ತಿದ್ದ ರೀತಿ, ಸೂಕ್ಷ್ಮದೃಷ್ಟಿ ಮತ್ತು ದಕ್ಷತೆ ಮುದ್ರಣಾಲಯದ ಎಲ್ಲ ಕೆಲಸಗಾರರಿಗೂ ಆಶ್ಚರ್ಯವನ್ನುಂಟು ಮಾಡುತ್ತಿತ್ತು. ನಾವು ಮೊದಲನೇ ಸಲವೇ ಅವರಿಗೆ ಎಷ್ಟೇ ಪರಿಪೂರ್ಣವಾದ ಪ್ರೂಫ್ ಕೊಟ್ಟಿದ್ದರೂ ಅವರು ಅದರಲ್ಲಿ ಹಲವಾರು ದೋಷಗಳನ್ನು ಗುರುತಿಸಿ ಕೊಡುತ್ತಿದ್ದರು. ಅವರು ಎಂದೂ ಬೇಸರಪಡುತ್ತಿರಲಿಲ್ಲ. ನಾವು ಅವರಿಂದ ಪ್ರೂಫ್ ನೋಡುವ ಕಲೆಯಲ್ಲಿ ಪರಿಣತಿ ಸಾಧಿಸಿದೆವು. ಅವರು ವಿಧಿಸಿದ್ದ ಎರಡು ಕರಾರುಗಳು ಇಂದಿಗೂ ನಮ್ಮ ಮುದ್ರಣಾಲಯದ ಕೆಲಸದ ಮಾರ್ಗದರ್ಶಿ ಸೂಚಿಗಳಾಗಿವೆ.

ಶ್ರೀ ಗೋವಿಂದರಾಯರಂಥ ಸಮರ್ಪಿತ, ಶ್ರಮನಿಷ್ಠ, ಸಾತ್ವಿಕ ಸಾಹಿತ್ಯ ಸೇವಕರೊಂದಿಗೆ ನಮ್ಮ ಸಂಪರ್ಕ ಬಂದುದಕ್ಕಾಗಿ ನಮ್ಮ ದೈವವನ್ನು ಕೊಂಡಾಡುತ್ತೇವೆ.

**ಶ್ರೀ ಸುಧಾರ್ಥಿ,** ಹಾಸನ

ಕನ್ನಡ ಸಾಹಿತ್ಯಾಸಕ್ತರಲ್ಲಿ ಕೆಲವರು ಡಾ|| ಭೈರಪ್ಪನವರ ಕಾದಂಬರಿಗಳನ್ನು ಬಹಳ ವಾಗಿ ಮೆಚ್ಚುತ್ತಾರಾದರೂ; ಈ ಕಾದಂಬರಿಗಳ ಮುಖಬೆಲೆಯನ್ನು ನೋಡಿ ಬೆಚ್ಚಿಬೀಳುವುದೂ ಉಂಟು! ಈ ಒಂದು ಅಂಶದ ಸುತ್ತಲೇ ಹೆಚ್ಚಾಗಿ ಚರ್ಚಿಸುವ ಕೆಲವು ಮಿತ್ರರು 'ಭೈರಪ್ಪನವರ ಸಾಹಿತ್ಯಿಕ ಪ್ರತಿಭೆಯ ಬಂಡವಾಳದಲ್ಲಿ ಸಾಹಿತ್ಯ ಭಂಡಾರದ ಗೋವಿಂದರಾಯರು ಕುಬೇರ ರಾಗುತ್ತಾರೆ' ಎಂದು ನುಡಿಯುತ್ತಿದ್ದುದುಂಟು. ಭೈರಪ್ಪನವರ ಕಾದಂಬರಿಗಳ ಮುಖಬೆಲೆ ಹೆಚ್ಚೆಂಬುದಷ್ಟೇ ನಿಜವಾಗಿ ಉಳಿಯಿತೇ ವಿನಃ ಅವರ ಪ್ರಕಾಶಕರಾದ ಮ. ಗೋವಿಂದ ರಾಯರೇನೂ ಕುಬೇರರಾಗಲಿಲ್ಲ.

ಕನ್ನಡದಲ್ಲಿ ಬರಹಗಾರರಿಗೆ ಹಿಂದೆ, ಇಂದು ಮಾತ್ರವಲ್ಲ ಮುಂದೆಯೂ ಸಹಾ; ಸರಿ ಯಾದ ಪ್ರಕಾಶಕರ ನಿರಂತರ ಬೆಂಬಲ, ಪ್ರೋತ್ಸಾಹ ಎಂಬುದು ಕನಸಿನ ಮಾತೇ ಸರಿ. ಇದಕ್ಕೆ ಲೇಖಕ ಹಾಗೂ ಪ್ರಕಾಶಕ, ಮುದ್ರಕ, ಮಾರಾಟಗಾರರು ಇವರುಗಳ ನಡುವಣ

ಅನುಮಾನ, ಅಪಮಾನ, ಅಪನಂಬಿಕೆ, ವಂಚನೆ, ಹಿತಶತ್ರುತ್ವ ಇತ್ಯಾದಿಗಳೇ ಮುಖ್ಯ ಕಾರಣವಾಗಿರುತ್ತವೆ. ಈ ದೃಷ್ಟಿಯಲ್ಲಿ ಗಮನಿಸಿದಾಗ; ಡಾ॥ ಭೈರಪ್ಪ ಹಾಗೂ ಮ. ಗೋವಿಂದರಾಯರ ನಡುವಣ ದೀರ್ಘಕಾಲೀನ ಅವಿಭಕ್ತ ಸಂಬಂಧವು ಒಂದು ಅನುಪಮ ಉದಾಹರಣೆಯೇ ಆಗಿದೆ. ಇವರಿಬ್ಬರೂ ಪರಸ್ಪರರಲ್ಲಿ ಹೊಂದಿದ್ದ ವಿಶ್ವಾಸ, ನಂಬಿಕೆ, ಅಭಿಮಾನ, ಭರವಸೆ, ಗೌರವ ಮುಂತಾದುವುಗಳು ಬಹಳ ಅಪರೂಪದ್ದೆಂದೇ ನನ್ನ ಭಾವನೆ.

'ನಿಮ್ಮ ಕಾದಂಬರಿಗಳ ಮುಖಬೆಲೆ ಹೆಚ್ಚು ಏಕೆ?' ಎಂಬ ಪ್ರಶ್ನೆಯನ್ನು ಅಭಿಮಾನಿಗಳು ಲೇಖಕ ಭೈರಪ್ಪನವರಲ್ಲಿ ಕೇಳಿದಾಗ; 'ಕಾದಂಬರಿ ಬರೆಯೋದು ಮಾತ್ರ ನನ್ನ ಕೆಲಸ. ಅದರ ಮುದ್ರಣ, ಪ್ರಕಟಣೆ, ಮಾರಾಟ ಇತ್ಯಾದಿ ಕೆಲಸ ಪ್ರಕಾಶಕರದು. ಈ ಪ್ರಶ್ನೆಗೆ ಅವರೇ ಉತ್ತರಿಸುವುದು ಸೂಕ್ತ ಎಂದು ನನ್ನ ಭಾವನೆ' ಎಂದು ಭೈರಪ್ಪನವರು ಉತ್ತರಿಸುತ್ತಿದ್ದರು. 'ಮುದ್ರಣದ ಗುಣಮಟ್ಟ ಕಾಗದದ ಗುಣಮಟ್ಟ ಉತ್ತಮವಾಗಿದ್ದು; ಪ್ರಕಾಶಕನ ಹೆಂಡತಿ ಮಕ್ಕಳೂ ಎಲ್ಲರಂತೆ ಊಟ ಮಾಡುವ ಅವಕಾಶವಿರಬೇಕೆಂದರೆ, ಪುಸ್ತಕದ ಬೆಲೆ ಸ್ವಲ್ಪ ಹೆಚ್ಚಾಗುವುದು ಅನಿವಾರ್ಯ' ಎಂದು ಗೋವಿಂದರಾಯರು ಉತ್ತರ ನೀಡುತ್ತ ಬಂದು, ಸುಮಾರು ಎರಡು ದಶಕಗಳಿಗೂ ಹೆಚ್ಚು ಕಾಲವಾಗಿದೆ.

ಉಳಿದ ವಿಚಾರ ಹೇಗಾದರೂ ಇರಲಿ ಪುಸ್ತಕದ ವಿಚಾರದಲ್ಲಿ ಮಾತ್ರ ಎಲ್ಲ ಅಂಶಗಳಲ್ಲೂ ಉತ್ತಮ ಗುಣಮಟ್ಟವಿರಬೇಕು; ಬೆಲೆ ಕಡಿಮೆ ಇರಬೇಕು, ಬೆಲೆ ಹೆಚ್ಚಿದ್ದರೆ ಚಿಲ್ಲರೆ ಗ್ರಾಹಕರಿಗೆ ರಿಯಾಯ್ತಿ ಇರಬೇಕು ಎಂದು ಕೆಲವರು ವಾದಿಸುವುದುಂಟು. ಇಂಥ ಮಹನೀಯರೊಬ್ಬರು ಸಾಹಿತ್ಯ ಭಂಡಾರಕ್ಕೆ ಬಂದು ಅದೇ ಅದೇ ಚರ್ಚೆಗೆ ನಿಂತಾಗ ಯಾವುದೇ ದಾಕ್ಷಿಣ್ಯವಿರದ ಗೋವಿಂದರಾಯರು, 'ರೀ ಸ್ವಾಮಿ, ಹೋಟೆಲಿನಲ್ಲಿ ತಿಂಡಿ ಪದಾರ್ಥದ ಬೆಲೆ ಏರಿಸಿದಾಗ ಗಿರಾಕಿಗಳಿಗೆ ರಿಯಾಯ್ತಿ ಕೇಳ್ತೀರೇನ್ರಿ? ಅಲ್ಲಿ ಇಲ್ಲದ ನಾಲಿಗೆ ಜೋರು, ಬುದ್ಧಿಯ ಚುರುಕುತನ ಇಲ್ಲಿ ಮಾತ್ರ ಏಕೆ?' ಎಂದು ಮಾರ್ನುಡಿದು, ವಾದಿಸಿದ ವ್ಯಕ್ತಿಯ ಬಾಯಿಗೆ ಬೀಗ ಹಾಕಿದ್ದು ಇಂದು ನಡೆದ ಘಟನೆಯಂತೆ ನೆನಪಿನಲ್ಲುಳಿದಿದೆ.

ಪುಸ್ತಕಗಳ ಮುಖಬೆಲೆಯ ಆಧಾರದಲ್ಲಿ ಮಾರಾಟಕ್ಕೆ ವಿನಿಮಯ ಮಾಡಿಕೊಳ್ಳುವ ಸಲಹೆಯನ್ನು ಕೆಲವು ಪುಸ್ತಕ ಮಾರಾಟಗಾರರು ಮುಂದಿಡುವುದುಂಟು. 'ಸಾಹಿತ್ಯದ ಗುಣಮಟ್ಟ ನಿರ್ಧರಿಸುವವರು ಓದುಗರು. ಆದರೆ ಪುಸ್ತಕದಲ್ಲಿ ಬಳಸಿರುವ ಕಾಗದ, ಮುದ್ರಣ, ರಕ್ಷಾಕವಚ, ಕಲಾತ್ಮಕತೆ ಇತ್ಯಾದಿಗಳ ಮೌಲ್ಯತುಲನೆ ಮಾಡಬೇಕಾದವನು ಪ್ರಕಾಶಕ. ಇಂಥ ಮೌಲ್ಯಗಳನ್ನು ಆಧರಿಸಿಯೇ ಮುಖಬೆಲೆ ನಿರ್ಧರಿಸಬೇಕು. ನಮ್ಮ ಪ್ರಕಟಣೆಯೊಂದಿಗೆ ನಿಮ್ಮ ಪ್ರಕಟಣೆಗಳು ಸರಿ ಜೋಡಿಯಾದೀತೆ ನೀವೇ ನೋಡಿ ಸ್ವಾಮಿ.' ಎಂದು ರಾಯರು ಅಂಥ ವಿನಿಮಯದ ವ್ಯಾಪಾರವನ್ನು ಸಮವಾಗಿ ನಿರಾಕರಿಸುತ್ತಿದ್ದುದು ಇಂದಿಗೂ ಅವಿಸ್ಮರಣೀಯವಾದುದು.

ಬಿಡಿ ಪ್ರತಿಗಳ ಮಾರಾಟದಲ್ಲಿ ರಿಯಾಯ್ತಿ ನೀಡಲು ಎಂದಿಗೂ ಸಮ್ಮತಿಸದಿದ್ದ ರಾಯರು, ಪುಸ್ತಕಗಳ ವ್ಯಾಪಾರದಲ್ಲಿ ಅದೊಂದು ಕಳಂಕ ಎಂದೇ ವಾದಿಸುತ್ತಿದ್ದರು. ಪುಸ್ತಕದ ಉತ್ಪಾದನೆಗೆ ಸಂಬಂಧಿಸಿದ ಎಲ್ಲ ವೆಚ್ಚಗಳನ್ನೂ ಲೆಕ್ಕ ಹಾಕಿ ನ್ಯಾಯವಾದ ಲಾಭಾಂಶವನ್ನೂ ಸೇರಿಸಿ ಯುಕ್ತವಾದ ಬೆಲೆ ನಿರ್ಧರಿಸಿ ಮುಗಿಸಿದ ನಂತರ, ಅದಕ್ಕೆ ಮತ್ತೆ ರಿಯಾಯ್ತಿ ನೀಡುವುದರ ಅರ್ಥ

ವೇನು? ಎಂಬುದು ಅವರ ಪ್ರಶ್ನೆಯಾಗಿತ್ತು.

'ತಾನು ಮಾಡುತ್ತಿರುವುದು ಸಾಹಿತ್ಯಸೇವೆ' ಎಂಬ ಸುಳ್ಳು ಪ್ರಚಾರಕ್ಕೆ ಇಳಿಯದೇ, ವೈಯಕ್ತಿಕ ಜೀವನ ಹಾಗೂ ವ್ಯವಹಾರ ಜೀವನಗಳೆರಡರಲ್ಲೂ ವ್ಯವಹಾರನಿಷ್ಠರೇ ಆಗಿ, ಎಂದಿಗೂ ರಾಜಿಯಾಗದೆ ಜೀವನ ಸಾಗಿಸಿದ ಹಿರಿಯಜೀವಿ ಗೋವಿಂದರಾಯರು ನೇಪಥ್ಯಕ್ಕೆ ಸರಿದದ್ದಾಯ್ತು. ಮುಂದಿನ ಹೊಣೆಗಾರಿಕೆಯನ್ನು ಇನ್ನೂ ಹೆಚ್ಚು ಸಮರ್ಥವಾಗಿ ನಿರ್ವಹಿಸಲೆಂದು ಮಕ್ಕಳನ್ನು ಸೂಕ್ತವಾಗಿ ತರಬೇತುಗೊಳಿಸಿರುವುದು ದಿ|| ಮಂ. ಗೋವಿಂದರಾಯರ ವ್ಯವಹಾರಪ್ರಜ್ಞೆಗೊಂದು ಸೂಕ್ತವಾದ ನಿದರ್ಶನ.

**ಶ್ರೀ ಕೆ.ಆರ್. ಕೃಷ್ಣಮೂರ್ತಿ,** ಬೆಂಗಳೂರು

ಶ್ರೀ ಗೋವಿಂದರಾಯರನ್ನು ನಾನು ಮೊದಲ ಬಾರಿಗೆ ಕಂಡಿದ್ದು ಈಗ್ಗೆ ಸುಮಾರು ಹದಿನೈದು ವರ್ಷಗಳ ಹಿಂದೆ. ನಾನೊಬ್ಬ ಹವ್ಯಾಸಿ ಲೇಖಕ ಹಾಗೂ ಪ್ರಕಾಶಕ. ಬರೆಯಬೇಕೆಂಬ ಮಾನಸಿಕ ಒತ್ತಡಕ್ಕೆ ಬಲಿಯಾಗಿ ಒಂದಿಷ್ಟು ಬರೆದೆ; ಬರೆದದ್ದನ್ನು ಪುಸ್ತಕರೂಪದಲ್ಲಿ ಕಾಣಬೇಕೆಂಬ 'ಅಹಂ'ಭಾವಕ್ಕೆ ತುತ್ತಾಗಿ ಅದನ್ನು ಪ್ರಕಟಿಸಿದೆ. ನಂತರದಲ್ಲಿ, ಜನಪ್ರಿಯ ಪ್ರಕಾಶನದ ವತಿಯಿಂದ ಐದಾರು ಪುಸ್ತಕಗಳನ್ನು ಹೊರತಂದೆ. ಒಂದಿಷ್ಟು ಹಣ ಕೈಬಿಟ್ಟು ಹೋಯಿತು; ಅದನ್ನು ಮರಳಿ ಪಡೆಯಬೇಕೆಂಬ ಪ್ರಯತ್ನ ಮಾಡಿದೆ. ನಾನು ಪ್ರಕಟಿಸಿದ ಪುಸ್ತಕದ ಪ್ರತಿಗಳನ್ನು ಪರಿಚಯಸ್ಥ ಪುಸ್ತಕ ಮಾರಾಟಗಾರರಲ್ಲಿ ಮಾರಾಟದ ಸಲುವಾಗಿ ಬಿಟ್ಟು ಬಂದೆ. ಪ್ರಾರಂಭದಲ್ಲಿ 'ಸಾಹಿತ್ಯ ಭಂಡಾರ'ದ ಹೊಸ್ತಿಲು ತುಳಿಯುವ ಧೈರ್ಯವಿರಲಿಲ್ಲ; ಏಕೆಂದರೆ ಅದು ಶ್ರೇಷ್ಠ ಗ್ರಂಥಗಳ ಪ್ರಕಟಣೆ ಹಾಗೂ ಮಾರಾಟಕ್ಕೆ ಮಾತ್ರ ಸೀಮಿತವಾದದ್ದೆಂಬ ಅಭಿಪ್ರಾಯ ನನ್ನದಾಗಿತ್ತು.

ನಾನು ಪ್ರಕಟಿಸಿದ ಪುಸ್ತಕಗಳ ಒಂದೊಂದು ಪ್ರತಿಯನ್ನು ಹಿಡಿದು ಒಮ್ಮೆ 'ಸಾಹಿತ್ಯ ಭಂಡಾರ' ಪ್ರವೇಶಿಸಿದೆ. ಶ್ರೀ ಗೋವಿಂದರಾಯರು ಮಾಲೀಕನ ಕುರ್ಚಿಯಲ್ಲಿ ಕುಳಿತಿದ್ದರು. ಅವರ ಗಂಭೀರ ಮುಖಮುದ್ರೆ ನನ್ನನ್ನು ಅಧೀರನನ್ನಾಗಿಸಿತು. ಆದರೂ ಅಳುಕದೆ ನಾನು ತಂದಿದ್ದ ಪುಸ್ತಕಗಳನ್ನು ಅವರ ಮೇಜಿನ ಮೇಲೆ ಬಿಡಿಸಿಟ್ಟೆ. ನಾನು ಪುಸ್ತಕ ಮಾರಲು ಬಂದಿರುವ 'ಮಿನಿ' ಪ್ರಕಾಶಕನೆಂದು ಅವರಿಗೆ ಅರ್ಥವಾಯಿತು. 'ಇಂಥಾ ಪುಸ್ತಕಗಳನ್ನು ನಾವು ಮಾರಾಟ ಮಾಡುವುದಿಲ್ಲ' ಎಂದೇ ಹಠಾತ್ತನೆ ನುಡಿದರು. ಪುಸ್ತಕಗಳ ಹೆಸರು ಹಾಗೂ ಅವುಗಳ ಬಾಹ್ಯ ಲಕ್ಷಣಗಳನ್ನು ಮಾತ್ರ ನೋಡಿ ಅವರು ಆ ರೀತಿ ಹೇಳಿರಬೇಕು ಎನ್ನಿಸಿತು. ನಾನು ಜಾಣತನದಿಂದ ಅವರಲ್ಲಿ ವಿನಂತಿಸಿಕೊಂಡೆ, 'ನಾನು ಪುಸ್ತಕ ಮಾರಲು ತಮ್ಮಲ್ಲಿಗೆ ಬರಲಿಲ್ಲ. ನಾನೊಬ್ಬ ಹವ್ಯಾಸಿ ಲೇಖಕ. ಕೆಲವು ಪುಸ್ತಕಗಳನ್ನು ಬರೆದು ಅಚ್ಚು ಹಾಕಿಸಿದ್ದೇನೆ. ತಾವು ಈ ಕ್ಷೇತ್ರದಲ್ಲಿ ಬಹಳಷ್ಟು ನುರಿತವರು. ನನ್ನ ಪುಸ್ತಕಗಳ ಗುಣಮಟ್ಟದ ಬಗ್ಗೆ ತಮ್ಮ ಅಭಿಪ್ರಾಯ ಕೋರಿ ಬಂದಿದ್ದೇನೆ.' 'ಸರಿ, ಪುಸ್ತಕಗಳನ್ನು ಇಲ್ಲಿಟ್ಟು ಹೋಗಿ, ಒಂದು ವಾರದ ಬಳಿಕ ಬಂದು ಕೊಂಡೊಯ್ಯಿರಿ.' ಎಂದಷ್ಟೇ ಹೇಳಿ ಬೇರೆಡೆ ತಮ್ಮ ಗಮನ ಹರಿಸಿದರು.

ಒಂದು ವಾರ ಕಳೆದ ನಂತರ, ಮತ್ತೆ ಅವರಲ್ಲಿಗೆ ಹೋದೆ. ಅವರಾಗಲೀ ನಾನಾಗಲೀ

ಹೆಚ್ಚು ಮಾತನಾಡಲಿಲ್ಲ. ಅವರಾಗಿಯೇ ನನ್ನ ಮುಖ ನೋಡಿದರು. 'ನಿಮ್ಮ ಪ್ರಕಟಣೆಗಳ ತಲಾ ಹತ್ತು ಪ್ರತಿಗಳನ್ನು ತಂದುಕೊಡಿ; ಹಾಗೆಯೇ ನಗದು ಬಿಲ್ಲು ತಯಾರಿಸಿ ತನ್ನಿ; ಬಿಲ್ಲು ಇಲ್ಲದೆ ನಾವು ವ್ಯಾಪಾರ ಮಾಡೋಲ್ಲ'–ಎಂದು ಚುರುಕಾಗಿಯೇ ಹೇಳಿದರು. ಪರೀಕ್ಷೆಯಲ್ಲಿ ಪಾಸಾದೆನೆಂದು ತಿಳಿದು, ಅವರು ಹೇಳಿದಂತೆಯೇ ಮಾಡಿದೆ. ಅಂದಿನಿಂದ ಅವರಿಗೆ ನಮ್ಮ ಪ್ರಕಾಶನದಲ್ಲಿ ವಿಶ್ವಾಸ ಮೂಡಿತು. ಆಗಿಂದಾಗ್ಗೆ ಹಲವಾರು ಸಲಹೆ ಸೂಚನೆಗಳನ್ನೂ ನನಗೆ ಕೊಡುತ್ತಿದ್ದರು. ಅವರು ತೀರಿಕೊಂಡ ನಂತರವೂ 'ಸಾಹಿತ್ಯ ಭಂಡಾರ'ದೊಂದಿಗಿನ ನನ್ನ ಸಂಬಂಧ ಮುರಿದುಬೀಳಲಿಲ್ಲ. ಕಟುವಾಗಿ, ತೀಕ್ಷ್ಣವಾಗಿ ಮಾತನಾಡುವ ಸ್ವಭಾವ ಅವರದಾಗಿತ್ತಾದರೂ ಹೃದಯವಂತಿಕೆ, ಪ್ರಾಮಾಣಿಕತೆ ಅವರ ನರನಾಡಿಗಳಲ್ಲಿ ತುಂಬಿ ಹರಿಯುತ್ತಿತ್ತು. ಪ್ರಕಾಶನ ಕ್ಷೇತ್ರದಲ್ಲಿ ಗುರು ಸ್ಥಾನದಲ್ಲಿದ್ದವರು ಗೋವಿಂದರಾಯರು ಎಂದರೆ ಸರಿಹೋದೀತು.

ಅವರದು ಅಚ್ಚುಕಟ್ಟಾದ, ಮುದ್ದಾದ ಬರವಣಿಗೆ. ಅವರ ಸ್ವಹಸ್ತ ಲಿಖಿತ ಲೆಕ್ಕಪತ್ರಗಳನ್ನು ಪರಿಶೀಲಿಸಿ ನೋಡಿದರೆ ಅಚ್ಚರಿಯಾಗುತ್ತದೆ. ಊಟಕ್ಕೆ ಕುಳಿತಾಗ ಎಣಿಕೆ ಮಾಡಿ ತುತ್ತು ತಿನ್ನುವ ಅಭ್ಯಾಸ ಸಭ್ಯತೆಗೆ ದೂರವಾದುದೆಂದೆನಿಸಿದರೂ ಅದು ಆರೋಗ್ಯದ ದೃಷ್ಟಿಯಿಂದ ಸರಿಯಾದ ಮಾರ್ಗವೇ ಎನಿಸುತ್ತದೆಯಲ್ಲವೆ. ಗೋವಿಂದರಾಯರ ವ್ಯವಹಾರ ಈ ರೀತಿಯದು. ಯಾವುದೇ ವ್ಯವಹಾರ ನಿಖರವಾಗಿರಬೇಕು, ನಿರ್ದಿಷ್ಟವಾಗಿರಬೇಕು, ದೋಷರಹಿತವಾಗಿರಬೇಕು, ನ್ಯಾಯಪರವಾಗಿರಬೇಕು ಎಂಬುದು ಅವರ ಧೋರಣೆಯಾಗಿತ್ತು. ಪರಾರ್ಜಿತವಾದದ್ದನ್ನು ಕಬಳಿಸುವ ಆಸೆಯಾಗಲೀ, ಸ್ವಯಾರ್ಜಿತವಾದದ್ದನ್ನು ಕಳೆದುಕೊಳ್ಳುವ ಉದಾಸೀನ ಪ್ರವೃತ್ತಿಯಾಗಲಿ ಅವರಲ್ಲಿರಲಿಲ್ಲ. ಹೇಳಿಕೊಳ್ಳುವಷ್ಟು ಆದಾಯವಿಲ್ಲದಿದ್ದರೂ ಕಾನೂನಿಗೆ ತಲೆಬಾಗಿ ಸ್ವಇಚ್ಛೆಯಿಂದ ಆದಾಯ ತೆರಿಗೆ ಪಾವತಿ ಮಾಡುತ್ತಿದ್ದ ಸತ್ಯಸಂಧರು ಗೋವಿಂದರಾಯರು.

**ಶ್ರೀ ಸೂರ್ಯನಾರಾಯಣ ಚಡಗ,** ಬೆಂಗಳೂರು

ನನಗಿಂತಲೂ ಹಿರಿಯರಾದ ಗೋವಿಂದರಾಯರನ್ನು ಪೂಜ್ಯ ಭಾವನೆಯಿಂದ ಕಂಡಿದ್ದೇನೆ. ದೀರ್ಘ ಕಾಲದ ನನ್ನ ಅವರ ಪರಿಚಯದಲ್ಲಿ, ಅವರೊಡನೆ ನಿಕಟ ಸಂಪರ್ಕ ಇಟ್ಟುಕೊಂಡಿದ್ದ ನಾನು ಬಹಳವಾಗಿ ಅವರನ್ನು ಮೆಚ್ಚಿಕೊಂಡಿದ್ದೇನೆ. ನಾನು ಲೇಖಕನಾಗಿ ಪ್ರಕಾಶಕನಾಗಿ ಕರ್ನಾಟಕದ ಅನೇಕ ಪುಸ್ತಕ ವ್ಯಾಪಾರಿಗಳೊಡನೆ ವ್ಯವಹರಿಸಿದ್ದೇನೆ. ಆದರೆ ಈ ಎಲ್ಲಾ ಪುಸ್ತಕ ವ್ಯಾಪಾರಿಗಳಿಗಿಂತ, ಗೋವಿಂದರಾಯರನ್ನು ಬೇರೆಯಾಗಿಯೇ ನೋಡಬೇಕಾಗುತ್ತದೆ. ನಮ್ಮಲ್ಲಿನ ಅನೇಕ ಪ್ರಕಾಶಕರಿಗೆ ಸಾಹಿತ್ಯದ ಪರಿಚಯವೇ ಇರುವುದಿಲ್ಲ. ಮಾರುಕಟ್ಟೆಯಲ್ಲಿ ಯಾವ ಲೇಖಕನಿಗೆ ಓದುಗ ಮನ್ನಣೆ ನೀಡುತ್ತಾನೋ ಅಂತಹ ಲೇಖಕರ ಪುಸ್ತಕಗಳನ್ನು ಪ್ರಕಟಿಸುತ್ತಾರೆ. ಅವರಿಗೆ ವ್ಯಾಪಾರವೇ ಮುಖ್ಯ. ಸಾಹಿತ್ಯದ ಮೌಲ್ಯ ಅಲ್ಲ. ಆದರೆ ಮ. ಗೋವಿಂದರಾಯರಿಗೆ ಕೃತಿಯನ್ನು ವಿಮರ್ಶಿಸಿ ಬೆಲೆ ಕಟ್ಟುವ ಅಭ್ಯಾಸವೂ ಇತ್ತು.

ನನ್ನ ಪ್ರಕಾಶನದ ಒಂದು ಬೃಹತ್ ಸಂಕಲನವನ್ನು ಮಾರಾಟಕ್ಕಾಗಿ ಅವರಲ್ಲಿಗೆ ಕೊಡಲು ಹೋದಾಗ ಮೊದಲು ಅವರು ಪುಸ್ತಕವನ್ನು ಹಿಡಿದು ಹತ್ತು ನಿಮಿಷ ಎಲ್ಲವನ್ನು

ಗಮನಿಸಿದ ತರುವಾಯ ನಡುವಿನ ಒಂದು ಹಾಳೆಯನ್ನು ತೆರೆದು ಮುದ್ರಣದ ಸಾಲನ್ನು ಲೆಕ್ಕ ಮಾಡಿ, 'ನೋಡಿ... ಈ ಪುಟದಲ್ಲಿ ಕೇವಲ ಇಪ್ಪತ್ತು ಸಾಲು ಇದೆ. ಅಂದರೆ ಹತ್ತು ಸಾಲು ಕಡಿಮೆಯಾಗಿದೆ. ಇದು ಓದುಗರನ್ನು ವಂಚಿಸಿದಂತೆ. ಇದೇ ರೀತಿ ಒಂದು ಕೃತಿಯಲ್ಲಿ ಇನ್ನೂರು ಪುಟಗಳಿದ್ದರೆ ಪ್ರತಿ ಪುಟದಲ್ಲೂ ಹೀಗಾದರೆ ಈ ಕಾರಣದಿಂದ ಒಂದು ಪುಸ್ತಕದ ಪುಟ ಸಂಖ್ಯೆ ಹೆಚ್ಚಾಗುತ್ತದೆ. ಸೀಮಿತ ವಿಷಯದಿಂದ ಅನೇಕ ಪುಟಗಳು ಅನಿವಾರ್ಯವಾಗುತ್ತದೆ. ಆಗ ಕಾಗದವೂ ಹೆಚ್ಚು ಬೇಕು. ಬೆಲೆಯೂ ಹೆಚ್ಚಾಗುತ್ತದೆ...' ಇದು ಮ. ಗೋವಿಂದರಾಯರು ಅನುಸರಿಸುತ್ತಿದ್ದ ರೀತಿ. ಅವರಿಂದ ನಾವು ಕಲಿಯುವ ಒಂದು ಒಳ್ಳೆಯ ಪರಿಪಾಠ.

ನಾನು ಮೊದಲು ಗೋವಿಂದರಾಯರನ್ನು ಕಂಡದ್ದು ಅವರು ಹೊಸತಾಗಿ ಬಳೇಪೇಟೆಯ ಸಂದಿಯಲ್ಲಿ ಪುಸ್ತಕ ಮಾರಾಟದ ಅಂಗಡಿ ಆರಂಭಿಸಿದಾಗ. ನಾನು ಸಂಪಾದಿಸಿದ 'ನಗೆನಂದನ' ಬೃಹತ್ ನಗೆಬರಹಗಳ ಸಂಕಲನವನ್ನು ಮಾರಾಟಕ್ಕಾಗಿ ಅವರ ಅಂಗಡಿಗೆ ಹೋದ ದಿನದಿಂದ ನನ್ನ ಅವರ ಸ್ನೇಹ, ನೇರ ವ್ಯವಹಾರ. 'ನನ್ನ ಅಂಗಡಿ ತುಂಬಾ ಚಿಕ್ಕದು. ಪುಸ್ತಕ ಹೆಚ್ಚು ತೆಗೆದುಕೊಂಡರೆ ಸ್ಥಳ ಸಾಕಾಗುವುದಿಲ್ಲ. ಕೇವಲ ಹತ್ತು ಪ್ರತಿ ಕೊಡಿ. ಹಾಗೆಯೇ ಬಿಲ್ಲು ಕೊಡಿ. ಹಣ ತೆಗೆದುಕೊಂಡು ಬಿಡಿ....' ಇದು ಅವರ ವ್ಯಾಪಾರದ ನೀತಿ. ಬೇರೆ ಯಾವ ವಿಚಾರದಲ್ಲೂ ಮಾತನಾಡುವುದಿಲ್ಲ. ಮತ್ತೆ ಅವರಿಗೆ ಪುಸ್ತಕದ ಅವಶ್ಯಕತೆ ಇದ್ದರೆ ನಮ್ಮ ವಿಳಾಸಕ್ಕೆ ಪತ್ರ ಬರುತ್ತದೆ. 'ದಯವಿಟ್ಟು ನಿಮ್ಮ ಪ್ರಕಾಶನದ ಇಂತಹ ಕೃತಿಯ ಹತ್ತು ಪ್ರತಿಯನ್ನು ಕಳುಹಿಸಿ ಕೊಡಿ' ಎಂದು.

ಮ. ಗೋವಿಂದರಾಯರ ಆ ಪ್ರಥಮ ಪರಿಚಯವೇ ನನಗೆ ಹೆಚ್ಚಿನ ಸಂತೋಷ ಕೊಟ್ಟಿದ್ದಲ್ಲದೆ ಅವರ ಬಗ್ಗೆ ಅಭಿಮಾನಪಟ್ಟಿದ್ದೇನೆ.

ನನ್ನ ಬದುಕಿನ ಒಂದು ಸಂದಿಗ್ಧ ಪ್ರಸಂಗದಲ್ಲಿ ನಾನು ಅವರಲ್ಲಿ ವಿಷಯ ಪ್ರಸ್ತಾಪಿಸಿದಾಗ, 'ನಿಮ್ಮ ಸಂಪಾದನೆಯ ಸಾಹಸ ಸಂಕಲನದ ಹದಿನೈದು ಪ್ರತಿಯನ್ನು ಕಳುಹಿಸಿಕೊಡಿ. ಹಣ ಕೊಡುತ್ತೇನೆ' ಎಂದರು. ಆಗ ಮಾಡಿದ ಉಪಕಾರ ಇನ್ನೂ ನೆನಪಿನಲ್ಲಿದೆ.

ನನ್ನ ಅವರ ವ್ಯವಹಾರದಲ್ಲಿ ಒಮ್ಮೆಯಾದರೂ ಬೇಸರ ಮಾಡಿಕೊಂಡ ಸಂದರ್ಭ ಬಂದದ್ದಿಲ್ಲ. ಅವರ ಯಾವುದೇ ಸಿದ್ಧಾಂತ, ಧೋರಣೆ, ನೀತಿ ನಿಲುವು, ಅಭಿಪ್ರಾಯದಲ್ಲಿ ಇನಿತೂ ತಪ್ಪು ನನಗೆ ಕಂಡದ್ದಿಲ್ಲ. ಸಹನೆ ಎನ್ನುವುದು ಗೋವಿಂದರಾಯರ ಬಹು ದೊಡ್ಡ ಆಸ್ತಿ. ಇಂದು ಅವರಿಲ್ಲ. ಅವರ ಆದರ್ಶ ನನ್ನ ಮನದಲ್ಲಿ ಇದೆ. ಅವರಂತೆ ನಾನೂ ಒಂದು ದಿನ ಈ ಜಗತ್ತನ್ನು ಬಿಡುವವನೇ. ಕೊನೆಗೆ ಉಳಿಯುವುದು ನಾವು ಮಾಡಿರುವ ಒಳ್ಳೆಯ ಕಾರ್ಯ ಮಾತ್ರ–ಎಂಬುದು ಗೋವಿಂದರಾಯರ ನಿಮಿತ್ತದಿಂದ ನೆನಪಿಗೆ ತಂದುಕೊಳ್ಳುತ್ತೇನೆ.

## ಶ್ರೀ ಮಲ್ಲೇಪುರ ಜಿ. ವೆಂಕಟೇಶ, ಹಂಪೆ

ಸುಮಾರು ಹದಿನೆಂಟು ವರ್ಷಗಳ ಹಿಂದಿನ ಸಂದರ್ಭ.

ನಾನು ಬೆಂಗಳೂರಿಗೆ ಬಂದು ವರ್ಷಗಳೆರಡು ಕಳೆದಿದ್ದವು. ಹೇಗೋ ಏನೋ ನಾನು

ಕೂಡ ಲೇಖಕರ ಪರಿವಾರದಲ್ಲಿ ಓಡಾಡಿಕೊಂಡು ಇದ್ದೆ. ಅಂಬೇಡ್ಕರ್, ಗಾಂಧಿ, ಜೆ.ಪಿ., ಲೋಹಿಯಾ ಅವರ ವಿಚಾರಗಳ ತಾಕಲಾಟದಲ್ಲಿ ಇದ್ದವನು. ಆಗ ಜೆ.ಪಿ. ಮತ್ತು ಲೋಹಿಯಾ ಬಗ್ಗೆ ಮಾತನಾಡದೆ ಇರುವವರು ಬದುಕುವುದಕ್ಕೆ, ಸಮೂಹದಲ್ಲಿ ಇರುವುದಕ್ಕೆ ನಾಲಾಯಕ್ಕು ಎಂಬ ಭಾವನೆ ಇದ್ದ ಕಾಲ. ನಾನು ಸ್ನೇಹಿತರೊಬ್ಬರಿಗೆ ಅವರ ಹೆಸರಲ್ಲೇ ಅಂಬೇಡ್ಕರ್ ಕುರಿತು ಪುಸ್ತಿಕೆಯೊಂದನ್ನು ಬರೆದು ಕೊಟ್ಟಿದ್ದೆ. ಅದನ್ನು ಮಾರುವ ಕೆಲಸ ನನ್ನ ಪಾಲಿಗೇ ಬಂತು. ಅದರಿಂದ ಸ್ವಲ್ಪ ಹಣವೂ ಕೂಡಿತು. ಪುಸ್ತಕ ಮುದ್ರಿಸಬೇಕೆಂಬ ಹುಚ್ಚೂ ಅಂಟಿ ಕೊಂಡಿತು. ನಾನು ಆಗ ಶಂ.ಬಾ. ಜೋಶಿ ಅವರ ವಿಚಾರಕ್ಕೆ ಜೋತುಬಿದ್ದ ಕಾಲ. ಅವರ ಬಳಿ ಇದ್ದ ಒಂದು ಸಣ್ಣ ಪುಸ್ತಿಕೆಯನ್ನು ತಂದು ಅದಕ್ಕೊಂದಿಷ್ಟು ಟಿಪ್ಪಣಿ ಬರೆದು, ಅವರ ಅನುಮತಿ ಪಡೆದು ಮುದ್ರಿಸಿದ್ದೆ. ಅದನ್ನು ಒಟ್ಟಾಗಿ ಕೊಳ್ಳುವವರನ್ನು ಹುಡುಕುತ್ತಿದ್ದೆ. ಧಾರವಾಡದ ಸ್ನೇಹಿತರೊಬ್ಬರು ಗೋವಿಂದರಾಯರ ಹೆಸರನ್ನು ಹೇಳಿ, ಶಂ.ಬಾ. ಜೋಶಿಯವರ ವಿದ್ಯಾರ್ಥಿ ಗಳೆಂದು ತಿಳಿಸಿದರು. ಬೆಂಗಳೂರಿಗೆ ಬಂದವನೇ ಬಳೇಪೇಟೆ ಸಂದಿಯ ಕಿರು ಓಣಿಯಲ್ಲಿದ್ದ 'ಸಾಹಿತ್ಯ ಭಂಡಾರ'ಕ್ಕೆ ಹೋದೆ.

ನಾನು ಅಂಗಡಿಗೆ ಹೋದಾಗ ಬೆಳಗ್ಗೆ ೧೧ರ ಸುಮಾರು ಇರಬೇಕು. ತೀಕ್ಷ್ಣ ಕಣ್ಣಿನ ಕನ್ನಡಕದ ಮುದುಕರೊಬ್ಬರು ಕೂತು ಲೆಡ್ಜರ್‌ಗೆ ಕಣ್ಣಿಟ್ಟಿದ್ದರು. ನನ್ನ ಶಬ್ದಕ್ಕೆ ತಲೆಯೆತ್ತಿ ನನ್ನತ್ತ ನೋಡಿದರು. ನಾನು ನಮಸ್ಕರಿಸಿ ಪ್ರವರ ಹೇಳಿಕೊಂಡೆ. ಶಂ.ಬಾ. ಜೋಶಿ ಅವರ ಹೆಸರನ್ನು ಹೇಳುತ್ತಲೇ ಕೈಯಲ್ಲಿದ್ದ ಲೆಡ್ಜರನ್ನು ಅತ್ತ ಇಟ್ಟು, ಕುಳಿತುಕೊಳ್ಳಲು ಸೂಚಿಸಿದರು. ಜೋಶಿಯವರ ಆರೋಗ್ಯ ವಿಚಾರಿಸಿದರು. ಅವರ ಶಿಷ್ಯರಾಗಿದ್ದ ವೇಳೆಯಲ್ಲಿ ನಡೆದ ಒಂದೆರಡು ಘಟನೆಗಳನ್ನು ನೆನಪಿಸಿಕೊಂಡರು. ನನ್ನ ಜೋಳಿಗೆಯಿಂದ ಅದೇ ತಾನೇ ಪ್ರಿಂಟಾಗಿದ್ದ 'ಭಾರತೀಯ ಸಂಸ್ಕೃತಿ ಯಲ್ಲಿನ ತಾತ್ವಿಕ ಚಿಂತನಗಳು' ಪುಸ್ತಕದ ಹಾಳೆಗಳನ್ನು ಅವರ ಕೈಗಿತ್ತೆ. 'ಮುದ್ರಣ ಇನ್ನೂ ಸುಧಾರಿಸಬೇಕಿತ್ತು' ಎಂದರು. ಒಂದೊಂದು ವಾಕ್ಯವೃಂದಗಳ ನಡುವಣ ಸ್ಥಳ ಬಿಟ್ಟದ್ದು ಅವರಿಗೆ ಸರಿಕಾಣಬರಲಿಲ್ಲ. ಆ ಸಣ್ಣ ಪುಸ್ತಿಕೆಗೆ ಹಾಕಿದ್ದ ಒಪ್ಪೋಲೆ ಕಂಡು ಚಕಿತರಾದರು. ಅದು ನನ್ನ ಮೊದಲ ಸಾಹಸ ಎಂದು ಹೇಳಿಕೊಂಡೆ. ಕೊನೆಗೆ ತಾವು ಪ್ರಕಟಿಸಿದ್ದ ಪುಸ್ತಕಗಳ ಬಗೆಗೆ ಹೇಳಿದರು. ಮಾದರಿಗಾಗಿ ಕೆಲವು ಪುಸ್ತಕಗಳನ್ನು ನನ್ನ ಕೈಯಲ್ಲಿಟ್ಟರು. ಹಸ್ತಪ್ರತಿ ತಯಾರಿಕೆ, ಟೈಪಿಂಗ್, ತಪ್ಪುಗಳ ತಿದ್ದಾವಣೆ, ಮುದ್ರಣ, ಕರಡಚ್ಚು ತಿದ್ದುವಿಕೆ, ಮುಖಪುಟ, ಬೈಂಡಿಂಗ್ ಬಗೆಗೆ ಮಧ್ಯಾಹ್ನದವರೆಗೆ ಪಾಠ ಹೇಳಿದರು. ಖಂಡಿತ ಅವರು ನಿಜಾರ್ಥದಲ್ಲಿ 'ಪಾಠ' ಹೇಳಿದರು.

ಒಂದು ಮಧ್ಯಾಹ್ನ ಅವರ ಜತೆ ಅದೂ ಇದೂ ಮಾತಾಡುತ್ತಿದ್ದೆ. ಅವರ ಮಗಳ ಮದುವೆ ಪ್ರಸ್ತಾಪ ಬಂದಿತು. ಆಗಾಗಲೇ ಎರಡನೇ ಮಗಳ ಮದುವೆ ಅಮೆರಿಕದ ಒಬ್ಬರೊಡನೆ ಆಗಿಹೋಗಿತ್ತು. ಇನ್ನೊಬ್ಬ ಹುಡುಗಿಯ ಬಗೆಗೆ ಅವರು ನನ್ನೊಡನೆ ಹೇಳಿದ್ದಿಷ್ಟು: 'ಯಾವುದೇ ಜಾತಿಯ ಒಳ್ಳೆಯ ಹುಡುಗ ಇದ್ದರೆ ಹೇಳಿ.' ನನಗೆ ಆ ಮಾತಿನಿಂದ ಹೆಚ್ಚಿನ ವಿಸ್ಮಯವೇನೂ ಆಗಲಿಲ್ಲ. ಅದಕ್ಕೆ ನಾನಂದೆ: 'ಅಲ್ಲಾ ಗೋವಿಂದ ರಾಯರೇ, ಒಬ್ಬ ಹಿಂದುಳಿದ ಹುಡುಗ ನಿಮ್ಮ ಅಳಿಯನಾಗಲು ಬಂದರೆ ಒಪ್ಪುವಿರೇನು?' ಅಂದೆ. ಅದಕ್ಕೆ ಅವರು 'ತಪ್ಪೇನು? ಹುಡುಗ ಒಳ್ಳೆಯವನಾಗಿದ್ದರೆ ಸಾಕು. ಅವನೂ ನನ್ನ ಮಗಳೂ ಸುಖವಾಗಿರಬೇಕು ಅಷ್ಟೇ' ಎಂದರು.

ಇದೇನು ಜರುಗಲಿಲ್ಲ; ಅದು ಬೇರೆ ಮಾತು. ಆದರೆ ಗೋವಿಂದರಾಯರ ವಿಶಾಲವಾದ ಮಾನವೀಯ ಮುಖದ ಪರಿಚಯ ಅಂದು ನನಗಾಯಿತು.

ಇಂಥದೇ ತುಸು ಬೇರೆ ಇನ್ನೊಂದು ಸಂದರ್ಭ ಹೇಳಬೇಕು. ನಾನು ಮೆಚ್ಚಿದ್ದ ಹುಡುಗಿಯನ್ನು ಕರೆದುಕೊಂಡು ಅಂಗಡಿಗೆ ಹೋದೆ. ನನ್ನ ಅವಳ ಮದುವೆ ಮರುದಿನ ಇತ್ತು. ನಾವಿಬ್ಬರೂ ಅವರ ಆಶೀರ್ವಾದ ಪಡೆಯುವುದೆಂದು ನನ್ನ ಅಭಿಲಾಷೆಯಾಗಿತ್ತು. ಆದರೆ ಅಂದು ಗೋವಿಂದರಾಯರು ಬಂದಿರಲಿಲ್ಲ. ಅವರ ದೊಡ್ಡ ಮಗ, ನನ್ನ ಸ್ನೇಹಿತ ರಾಜ ಇದ್ದ. ಅವನಿಗೆ ನನ್ನವಳ ಪರಿಚಯ ಮಾಡಿಕೊಟ್ಟೆ. ಮದುವೆಗೆ ಬರಲು ಹೇಳಿದೆ. ವಿಶೇಷವಾಗಿ ಗೋವಿಂದರಾಯರಿಗೆ ತಿಳಿಸಲು ಹೇಳಿದೆ. ಅವನು ಒಪ್ಪಿಕೊಂಡ. ನಾನು ಕೆಲಸ ಮಾಡುತ್ತಿದ್ದ ಕನಕಪುರಕ್ಕೆ ಹಿಂದಿರುಗಿದೆ. ಮದುವೆಗೆ ಗೆಳೆಯ ರಾಜ ಬಂದ. ಅವನೊಡನೆ ಸ್ನೇಹಿತನೊಬ್ಬ ಬಂದಿದ್ದನೆಂದು ತೋರುತ್ತೆ. ಗೋವಿಂದರಾಯರ ಆಶೀರ್ವಾದ ಮಗನ ಮೂಲಕ ತಲುಪಿತು. ಆದರೆ, ಮುಂದೆ ನನ್ನ ಹೆಂಡತಿಯ ಸೀಮಂತಕ್ಕೆ ಹಿರಿಯರಾದ ಗೋವಿಂದರಾಯರು ಮತ್ತು ಅವರ ಶ್ರೀಮತಿಯವರೂ ಬಂದರು. ಸೀಮಂತ ನಡೆದದ್ದು ನನ್ನ ಆಪ್ತ ಬಂಧುಗಳಾದ ದಿ|| ವೇಣುಗೋಪಾಲ ಸೊರಬ ಅವರ ಮನೆಯಲ್ಲಿ. ನನ್ನ ಹೆಂಡತಿಯ ಹಿಗ್ಗಿಗೆ ಕೊನೆಯೇ ಇಲ್ಲ. ಆ ಸಂದರ್ಭವನ್ನು ನೆನಸಿಕೊಂಡರೆ ಈಗಲೂ ಪುಲಕವಾಗುತ್ತದೆ.

ಗೋವಿಂದರಾಯರು ತೀರಿಕೊಳ್ಳುವ ಕೆಲವು ತಿಂಗಳುಗಳ ಹಿಂದೆ ಅವರ ಮನೆಗೆ ಹೋಗಿದ್ದೆ. ಆ ಹೊತ್ತಿಗೆ ಅವರಿಗೆ ಸ್ಮೃತಿ ತಪ್ಪಿಹೋಗಿತ್ತು. ಕಿವಿ, ಕಣ್ಣುಗಳು ತಮ್ಮ ದೃಷ್ಟಿಪಾಟವವನ್ನು ಕಳೆದುಕೊಂಡಿದ್ದವು. ನಾನು ಹೋದವನೇ ಮಂಚದ ಮೇಲೆ ಮಲಗಿದ್ದ ಅವರನ್ನು ಸಮೀಪಿಸಿದೆ. ಅಮ್ಮ ನಾನು ಬಂದದ್ದನ್ನು ಸಮೀಪಕ್ಕೆ ಹೋಗಿ ಹೇಳಿದರು. ಕಣ್ಣುಬಿಟ್ಟು ತುಸು ಎದ್ದು ಕುಳಿತರು. 'ಮಲಗಿ... ಮಲಗಿ...' ಎಂದೆ. ಅವರು ಕೇಳಲಿಲ್ಲ. ನಾನು ಅವರಿಗೆ ತುಸು ಸಮಾಧಾನ ಹೇಳಿದೆ. 'ಆಯಿತು' ಎಂದರು. ನಾನು ಬಂದದ್ದು ಮಾತಾಡಿದ್ದು ಅವರಿಗೆ ಸಮಾಧಾನ ತಂದಿದೆ ಎಂದು ಅಮ್ಮ ಹೇಳಿದರು. ಆ ಹೊತ್ತಿನಲ್ಲೂ ನನ್ನ ಹೆಂಡತಿ, ಮಕ್ಕಳನ್ನು ವಿಚಾರಿಸಿಕೊಂಡರು. 'ಇನ್ನೊಮ್ಮೆ ಬರುವಾಗ ಕರೆದುಕೊಂಡು ಬನ್ನಿ' ಎನ್ನುವುದನ್ನು ಹೇಳದಿರಲಿಲ್ಲ. ಅವರ ಜತೆ ಸುಮಾರು ಎರಡು ಗಂಟೆ ಇದ್ದೆ. ನನ್ನನ್ನು ಅವರು ಥಟ್ಟನೆ ಹೋಗಲು ಬಿಡಲಿಲ್ಲ. ನನ್ನೊಡನೆ ಏನೇನೋ ಮಾತಾಡಬೇಕೆಂಬ ಅಪೇಕ್ಷೆ ಇದ್ದಂತಿತ್ತು. ನನಗೆ ಆ ಭಾವ ತಿಳಿಯುತ್ತಿತ್ತು. ನಾನೂ ಒಂದೆರಡು ಬಾರಿ 'ಇನ್ನೇನಾದರೂ ಹೇಳೋದಿದೆಯೆ?' ಎಂದೆ. ಸುಮ್ಮನೆ ತಲೆ ಆಡಿಸಿದರು. ಮತ್ತೆ 'ನಾಳೆ ಬರ್ತೇನೆ' ಎಂದು ಹೇಳಿದೆ; ಆದರೆ ಹೋಗಲಾಗಲಿಲ್ಲ.

## ಶ್ರೀ ಹಾ.ವೆಂ. ನಾಗೇಶ, ಧಾರವಾಡ

ಈಗೊಂದು ಹತ್ತು-ಹನ್ನೊಂದು ವರ್ಷಗಳ ಹಿಂದಿನ ಮಾತು. ನಾನಾಗ ಧಾರವಾಡದ ಜೆ.ಎಸ್.ಎಸ್. ಕಾಲೇಜಿನಲ್ಲಿ ಪ್ರಾಧ್ಯಾಪಕನಾಗಿದ್ದೆ. ನಾನಿದ್ದಷ್ಟು ಕಾಲ ಕಾಲೇಜಿನ ಗ್ರಂಥಾಲಯದ ಉಸ್ತುವಾರಿ ನನ್ನದಾಗಿತ್ತು. ಒಂದು ಮಧ್ಯಾಹ್ನ ನಾನು ಎಂದಿನಂತೆ ಗ್ರಂಥಪಾಲರ ಕೊಠಡಿ

ಯೊಳಕ್ಕೆ ಹೋದಾಗ ಓರ್ವ ಖಾದೀಧಾರಿ ವ್ಯಕ್ತಿ ನಮ್ಮ ಗ್ರಂಥಪಾಲ ಶ್ರೀ ಅನಿಲ ಧಾರವಾಡ ಕರರೊಡನೆ ಮಾತಾಡುತ್ತ ಕುಳಿತಿದ್ದರು. ನಾನು ಒಳಗೆ ಬರುತ್ತಲೇ ಧಾರವಾಡಕರ ನನ್ನನ್ನು ಆ ವ್ಯಕ್ತಿಗೂ, ಆ ವ್ಯಕ್ತಿಯನ್ನು ನನಗೂ ಪರಿಚಯಿಸಿದರು. ಅವರು ಭೈರಪ್ಪನವರ ಕಾದಂಬರಿ ಗಳನ್ನು ನಮಗೆ ಕೊಟ್ಟ ಹಾಗೂ ಅನೇಕ ಕಷ್ಟಕಾರ್ಪಣ್ಯಗಳ ನಡುವೆಯೂ ಪುಸ್ತಕ ಪ್ರಕಟಣೆ ಮತ್ತು ವ್ಯಾಪಾರ ನಡೆಸಿಕೊಂಡು ಬಂದಿದ್ದ ಮಂ. ಗೋವಿಂದರಾಯರೆಂದು ತಿಳಿದು ಸಂತೋಷ ವಾಯಿತು. ಇದೇ ನನ್ನ ಅವರ ಪ್ರಥಮ ಭೇಟಿಯಾದರೂ ನಾವಿಬ್ಬರೂ ಒಬ್ಬರೊಬ್ಬರ ಬಗೆಗೆ ಕೇಳಿಗೊತ್ತು ಎಂದೆವು. ಪುಸ್ತಕ ಪ್ರೇಮಿಯಾದ ನಾನು ಗೋವಿಂದರಾಯರ ಬಗೆಗೆ ಕೇಳಿ ತಿಳಿಯದೇ ಇರುವುದು ಹೇಗೆ ಸಾಧ್ಯ? ಅವರ ಇತ್ತೀಚೆಗಿನ ಪ್ರಕಟಣೆಗಳ ಬಗೆಗೆ ಮಾತುಕತೆಯಾಯಿತು. ಪುಸ್ತಕ ಪ್ರಕಾಶನ ಮತ್ತು ಮಾರಾಟದ ಬಗೆಗೆ ಹತ್ತು–ಹದಿನೈದು ನಿಮಿಷ ಮಾತನಾಡಿದೆವು. ನಾನು ಎಂದಿನಂತೆ ಅವಸರದಲ್ಲಿದ್ದೆ. ಆದರೆ ಪ್ರಶಾಂತ ಮುಖ ಮುದ್ರೆಯ ಹಾಗೂ ಮೃದುವಚನದ ಅವರು ನನ್ನ ಮೇಲೆ ತಮ್ಮ ಸಜ್ಜನಿಕೆಯ ಛಾಪನ್ನು ಆ ಮೊದಲ ಭೇಟಿಯಲ್ಲಿ ಒತ್ತಿಬಿಟ್ಟಿದ್ದರು.

ಮಾತು ಮುಗಿಯಿತು ಎನ್ನುವ ಹೊತ್ತಿಗೆ ಅವರು, 'ಸ್ವಾಮೀ ನೀವು ದಕ್ಷಿಣ ಕನ್ನಡ ಕಡೆಯವರೋ?' ಎಂದು ಕೇಳಿದರು. 'ಅಲ್ಲಿ ಹುಟ್ಟಿದ್ದಂತೂ ಹೌದು' ಎಂದೆ. 'ಎಲ್ಲಿ?' ಎಂದರು. 'ಕುಂದಾಪುರ ತಾಲೂಕಿನ ಹಾಲಾಡಿ ಎಂಬ ಚಿಕ್ಕ ಹಳ್ಳಿ' ಎಂದೆ. 'ಹಾಲಾಡಿಯೋ? ನಿಮ್ಮ ಊರಿನ ವೆಂಕಟಗಿರಿನಾಯಕ ಎಂಬವರು ನಿಮಗೆ ಗೊತ್ತೋ?' ಎಂದರು. 'ಯಾಕೆ, ಹೇಳಿ' ಎಂದೆ. 'ಯಾಕಿಲ್ಲ, ಅವರು ಈಗ ಇದ್ದಾರೋ?' ಎಂದು ಕೇಳಿದರು. 'ಇಲ್ಲ, ೧೯೭೦ರ ಹೊತ್ತಿಗೆ ತೀರಿಹೋದರು' ಎಂದೆ. 'ಹೌದಾ, ಆ ಸಜ್ಜನರು ನನ್ನ ಅಂಗಡಿ ಪ್ರಾರಂಭ ಆದ ಲಾಗಾಯ್ತು ತಪ್ಪದೇ ವರ್ಷಕ್ಕೆ ಒಂದು ಅಥವಾ ಎರಡು ಬಾರಿ ಪ್ರತಿಸಲ ಎರಡು–ಮೂರು ಪುಸ್ತಕಗಳಿಗೆ ಆರ್ಡರ್ ಕೊಟ್ಟು ವಿ.ಪಿ.ಪಿ. ಮೂಲಕ ಕಳುಹಿಸುವಂತೆ ಬರೆಯುತ್ತಿದ್ದರು. ಒಮ್ಮೆಯೂ ವಿ.ಪಿ.ಪಿ. ಮರಳಿ ಬಂದದ್ದಿಲ್ಲ. ಪ್ರತಿಸಲ ಕೆಟಲಾಗ್ ಕಳುಹಿಸಿದಾಗ ಅಥವಾ ಪೋಸ್ಟ್‌ಕಾರ್ಡ್ ಬರೆದು ಹೊಸ ಪ್ರಕಟಣೆಗಳ ಬಗೆಗೆ ಬರೆದಾಗ ಅವರಿಂದ ಖಾತ್ರಿಯಾಗಿ ಆರ್ಡರ್ ಬರುತ್ತಿತ್ತು. ಈಗ ಅನೇಕ ವರ್ಷಗಳಿಂದ ಅವರಿಂದ ಯಾವ ಆರ್ಡರೂ ಬಂದಿಲ್ಲ. ಅವರಂತೆ ನಿರಂತರ ಪುಸ್ತಕ ಚಟ ಉಳಿಸಿಕೊಂಡವರು ಕಡಿಮೆ. ಅದಕ್ಕೇ ಕೇಳಿದೆ' ಎಂದರು. ಸ್ವಲ್ಪ ನಿಂತು ಮತ್ತೆ, 'ಅಂದಹಾಗೆ, ಅವರ ಅಡ್ರೆಸ್ಸಿನಲ್ಲಿ ಜನರಲ್ ಮರ್ಚೆಂಟ್ಸ್ ಎಂದಿರುತ್ತಿತ್ತಲ್ಲ, ಏನು ವ್ಯಾಪಾರವೋ? ಅನುಕೂಲವಂತರೋ?' ಎಂದು ಕುತೂಹಲ ವ್ಯಕ್ತಪಡಿಸಿದರು. 'ಹಾಗೇನಿಲ್ಲ, ಒಂದು ಸಣ್ಣ ಕಿರಾಣಿ ಅಂಗಡಿ ಇಟ್ಟುಕೊಂಡಿದ್ದರು. ಮುಂದೆ ಸ್ವಲ್ಪ ಬೇಸಾಯವೂ ಇತ್ತು. ಮನೆಯಲ್ಲಿ ರಾಶಿಗಟ್ಟಲೆ ಪುಸ್ತಕ ಇಟ್ಟಿದ್ದರು. ಸಾಯುವ ಮುಂಚೆ ತಮ್ಮ ಸಂಗ್ರಹವನ್ನೆಲ್ಲ ಅಲ್ಲಿಯ ಶಾಲೆಗಳಿಗೆ ಹಂಚಿಕೊಟ್ಟರು. ಈಗ ಅವರಿಲ್ಲ. ಅವರ ಮಕ್ಕಳೆಲ್ಲಾ ಊರು ಬಿಟ್ಟು ಹೋಗಿ ಬಹಳ ವರ್ಷಗಳಾಯ್ತು' ಎಂದೆ. 'ಅವರ ಬಗ್ಗೆ ನಿಮಗೆ ಚೆನ್ನಾಗಿ ಗೊತ್ತಿರುವಂತಿದೆ.' 'ಗೊತ್ತಿಲ್ಲದೇ ಏನು ಸ್ವಾಮಿ! ನಾನು ಅವರ ಮಗ' ಎಂದೆ! 'ನಿಮಗೂ...' 'ಹೌದು, ನನಗೂ ಪುಸ್ತಕ ಚಟ ಪಿತ್ರಾರ್ಜಿತವಾಗಿ ಬಂದಿದೆ.' ಎಂದು ಒಳ್ಳೇ ಅಭಿಮಾನದಿಂದ ಹೇಳಿದೆ.

ಗೋವಿಂದರಾಯರು ಮುಂದುವರಿದು ತಮ್ಮ ನೆನಪಿನ ಭಂಡಾರದಿಂದ ಒಂದು ನೆನಪನ್ನು ಹೆಕ್ಕಿಕೊಟ್ಟರು. ವೆಂಕಟಗಿರಿನಾಯಕರು ಒಮ್ಮೆ 'ಪುರಾಣನಾಮ ಚೂಡಾಮಣಿ' ತರಿಸಿಕೊಂಡಿದ್ದರಂತೆ. ಅದು ಗೋವಿಂದರಾಯರ ಪ್ರಕಟಣೆಯಾಗಿರಲಿಲ್ಲ. ಮತ್ತು ಸುಲಭವಾಗಿ ಸಿಗುತ್ತಲೂ ಇರಲಿಲ್ಲ. ಎಲ್ಲಿಂದಲೋ ಕಷ್ಟಪಟ್ಟು ದೊರಕಿಸಿ ಅವರಿಗೆ ಕೊಟ್ಟಿದ್ದರಂತೆ. ಇದಾದ ಐದಾರು ತಿಂಗಳ ಮೇಲೆ ಅವರು, 'ತಮ್ಮ ಪ್ರತಿ ಕಳೆದುಹೋಗಿದೆ. ತನಗೆ ಆ ಪುಸ್ತಕ ಅಮೂಲ್ಯವಾದುದು. ಆದ್ದರಿಂದ ಹೇಗಾದರೂ ಮಾಡಿ ಇನ್ನೊಂದು ಪ್ರತಿ ದೊರಕಿಸಿಕೊಡಿ' ಎಂದು ಬರೆದಿದ್ದರಂತೆ. "ಎಷ್ಟು ಕಷ್ಟಪಟ್ಟರೂ ನನಗೆ ಒಂದೇ ಒಂದು ಪ್ರತಿ ದೊರಕಿಸಿಕೊಡುವುದು ಆಗಲಿಲ್ಲ. ಪ್ರತಿ ತಿಂಗಳಿಗೊಮ್ಮೆ ಎಂಬಂತೆ ಅವರು ನನಗೆ ಪತ್ರ ಬರೆದು 'ಪುರಾಣನಾಮ ಚೂಡಾಮಣಿ'ಯ ನೆನಪು ಮಾಡುತ್ತಿದ್ದರು. ಕೊನೆಗೂ ನಾನು ಕೈಚೆಲ್ಲಿದ ಮೇಲೆ ಒಂದೆರಡು ವರ್ಷ ಕಾದು ನಂತರ ಅದನ್ನು ಮರೆತಂತೆ ಕಾಣುತ್ತದೆ" ಎಂದರು. ತಾನು ಎಂದೂ ಕಾಣದ ಪುಸ್ತಕ ಪ್ರೇಮಿ ಗಿರಾಕಿಯೊಬ್ಬರ ಬಗ್ಗೆ ಅವರಲ್ಲಿ ಇನ್ನೂ ಮಾಹಿತಿಯಿತ್ತು. ಕೇಳಿ ಬೆರಗಾದೆ.

ನನ್ನ ತಂದೆಯವರ ಈ ಪುಸ್ತಕ ಪ್ರೇಮದ ಬಗ್ಗೆ ನನಗೆ ಅರಿವಿತ್ತು. ಆದರೆ ಗೋವಿಂದರಾಯರ ಕಥನದ ನಂತರ ಗೋವಿಂದರಾಯರಂಥ ಸಜ್ಜನ ಪುಸ್ತಕಪ್ರೇಮಿ ವ್ಯಾಪಾರಿಗಳ ಸಖ್ಯ ಪಡೆದ ನನ್ನ ತಂದೆಯವರ ಬಗ್ಗೆ ಇನ್ನಷ್ಟು ಅಭಿಮಾನ ಮೂಡಿತು. ನಂತರದ ವರ್ಷಗಳಲ್ಲಿ ಅವರ ಭೇಟಿ ಆಗಾಗ ಆಗುತ್ತಿತ್ತು. ಅವರನ್ನು ಹತ್ತಿರದಿಂದ ಕಾಣುತ್ತ ಹೋದಂತೆ ಅವರ ಬಗೆಗಿನ ಗೌರವ ಹೆಚ್ಚುತ್ತ ಹೋಗುತ್ತಿತ್ತು. ಪ್ರತಿಯೊಬ್ಬ ಪುಸ್ತಕ ಪ್ರೇಮಿಗೆ ಗೋವಿಂದರಾಯರಂಥ ಪುಸ್ತಕ ಪ್ರೇಮಿಯಾದ ಒಬ್ಬ ಸಜ್ಜನ ವ್ಯಾಪಾರಿ ಸಿಕ್ಕಿದರೆ ಎಷ್ಟು ಚೆನ್ನ ಎಂದು ಮನಸ್ಸಿನಲ್ಲೇ ಅವರನ್ನು ವಂದಿಸುತ್ತೇನೆ. ಗೋವಿಂದರಾಯರ ಪ್ರಸ್ತಾಪ ಬಂದಾಗಲೆಲ್ಲ ನನಗೆ ನನ್ನ ತಂದೆಯ ನೆನಪು ಬರುವುದು ಎಂಥ ಯೋಗಾಯೋಗ!

**Mr. Dan young,** Albuquerqe, U.S.A.

I first met Govindarao in 1979 when I arrived in Bangalore after teaching in Nigeria. He had been told that I might be coming, but did not know the exact time, or even I would come at all. He greeted me graciously early in the morning and made sure that I had breakfast. My first impression of him was of his physical appearance: a small man wearing a dhoti and a khadi shirt and vest. His slight frame had a wiry strength and delicate motion. As I spent more time in his home, I was able to observe him and learn about the depth that lay beneath his unimposing appearance.

One of the things I learned was that he ran his publishing business -

Sahitya Bhandara - with meticulous attention to detail. His business was successful, but he could not be considered a business man first and foremost. By that I mean that he was not the sort of man who would do anything for the success of his business. First and foremost Govindarao was a principled man: one who believed in doing what was right for all of the parties concerned. There were many occasions where he could have increased his business or made life for his family more comfortable, but he rejected all proposals that involved dishonesty. It is indicative of his unassuming character that I learned of his devotion to his principles from others: he was not the sort of man who drew attention to his own virtues or acts of kindness.

He was also devoted to Kannada, to maintaining the vitality and currency of his mothertongue both through his publishing and through his insistence that his children learn to speak Kannada well without mixing in English words. While staying in his house, I began to learn the Kannada alphabet, and I tried in a stumbling way to read the headlines of the daily papers. One of my prize possessions is the four volume set of Kittel's Kannada dictionary he gave me as a parting gift.

On my second visit to India in 1980, my purpose was not just to visit but to marry his second daughter, Shubha. That he should agree to allow his daughter to marry a foreigner was another indication of his character. Although he was conservative in his dress and zealous in his support of Kannada, he was never a conservative in social matters. He was a true Gandhian in his openness to all people and communities. His openness was not blind, however; Govindarao was careful to learn my views on family, marriage and divorce before he would give his approval to the marriage.

In 1990 we visited and began to talk with him in the evenings about his life. He became very interested in recording his reminiscences. We wrote down pages of memories. We would sit on the veranda and listen to him speak about his school days, his leaving Mangalore for the North of Karnataka, and the people who befriended him there. Perhaps it was the kindness he received when he most needed it that set the direction for his later life.

We were with him on the day that he died. He was surrounded by his family; all of his children and grandchildren were near. His brother was there. So many of the people who today owe their comfort and prosperity to his support were there. His story had not yet been completed; his many pages of reminiscences must still be ordered and put into a coherent narrative.

## ಶ್ರೀ ಎಸ್.ಎಲ್. ಭೈರಪ್ಪ, ಮೈಸೂರು

ನಮ್ಮ ಸಾಹಿತ್ಯ ಭಂಡಾರದ ಗೋಪಿಂದರಾಯರು ಆತ್ಮಕಥೆ ಬರೆದರೆ ತುಂಬ ಮೌಲಿಕವಾದ ಅನುಭವಗಳು ದಾಖಲಾಗುತ್ತವೆಂದು ನನಗೆ ಅನೇಕ ವರ್ಷಗಳಿಂದ ಅನ್ನಿಸುತ್ತಿತ್ತು. ಹತ್ತು ವರ್ಷದ ಹಿಂದೆ ನಾನು, 'ನಿಮ್ಮ ಜೀವನ ವೃತ್ತಾಂತವನ್ನು ಜ್ಞಾಪಿಸಿಕೊಂಡು ಬರೆಯಿರಿ. ನಿಮ್ಮ ಚಿಕ್ಕ ವಯಸ್ಸಿನ ಅನುಭವ, ಸ್ವಾತಂತ್ರ್ಯ ಚಳವಳಿಯ ವಿವರಗಳು, ಪುಸ್ತಕ ವ್ಯಾಪಾರ ಆರಂಭಿಸಿ ಬೆಳೆಸಿದ ಬಗೆ ಇವೆಲ್ಲ ಬಹುಮುಖ್ಯ. ಜ್ಞಾಪಕ ಬಂದದ್ದನ್ನೆಲ್ಲ ಬರೆಯಿರಿ. ಆಮೇಲೆ ನಾನು ಅದಕ್ಕೊಂದು ರೂಪ ಕೊಡುತ್ತೀನಿ. ಪುಸ್ತಕ ರೂಪದಲ್ಲಿ ಪ್ರಕಟಿಸೋಣ' ಎಂದು ಹಲವು ಬಾರಿ ಹೇಳಿ ಒತ್ತಾಯ ಮಾಡಿದೆ. ಅವರು ಬರೆಯಲು ಶುರು ಮಾಡಿದರು. ಅಷ್ಟರಲ್ಲಿ ಕಣ್ಣಿನ ಪೊರೆ ಬೆಳೆಯತೊಡಗಿತು. ಪೂರ್ತಿ ಬೆಳೆಯುವ ತನಕ ಶಸ್ತ್ರಚಿಕಿತ್ಸೆ ಮಾಡುವಂತಿಲ್ಲ ಎಂದು ನೇತ್ರತಜ್ಞರು ಹೇಳಿದರು. ಜತೆಗೆ ನೆನಪು ಕಲಸಿಹೋಗುತ್ತಿತ್ತು. ಚಿಕ್ಕ ವಯಸ್ಸಿನ ಘಟನೆಗಳು ನಡು ವಯಸ್ಸಿನ ಘಟನೆಗಳೊಂದಿಗೆ ಸಿಕ್ಕಿ ಗೋಜಲಾಗುತ್ತಿದ್ದವು. ಯಾವುದರಿಂದ ಯಾವುದು, ಎಲ್ಲಿಂದ ಎಲ್ಲಿಗೆ ಎಂಬುದು ಸ್ಪಷ್ಟವಾಗುತ್ತಿರಲಿಲ್ಲ. ಲೇಖನಿ ಹಿಡಿಯುವ ಬೆರಳುಗಳ ಬಿಗಿಯೂ ಬಹಳ ಹೊತ್ತು ಇರುತ್ತಿರಲಿಲ್ಲ. ಹೀಗಾಗಿ ಆರಂಭವಾದದ್ದು ಮುಂದುವರಿಯಲಿಲ್ಲ.

ಈ ಲೇಖನದಲ್ಲಿ ನನ್ನ ಅವರ ಸಂಬಂಧದ ವಾಸ್ತವ ಚಿತ್ರಣವನ್ನಷ್ಟೇ ಕೊಡುತ್ತೇನೆ. ಇದು ಖಂಡಿತವಾಗಿಯೂ ಶ್ರದ್ಧಾಂಜಲಿಯಾಗಿ ಬರೆದುದಲ್ಲ. ಶ್ರದ್ಧಾಂಜಲಿಯಲ್ಲಿ ಮೃತವ್ಯಕ್ತಿಯ ಗುಣಗಾನವು ಪ್ರಧಾನಾಂಶವಾಗಿರುತ್ತದೆ. ಗುಣಗಾನಕ್ಕಿಳಿದರೆ ಗೋಪಿಂದರಾಯರ ಪ್ರೇತವು ಪ್ರತ್ಯಕ್ಷವಾಗಿ, 'ನೀವು ಕೂಡ ಸುಳ್ಳು ಬರಹ ಶುರುಮಾಡಿಬಿಟ್ಟಿರಾ?' ಎಂದು ಗದರಿಕೊಳ್ಳುತ್ತದೆಂದು ನನಗೆ ಗೊತ್ತಿದೆ. ಬದುಕಿದ್ದಾಗ ಇದ್ದ ಸ್ವಭಾವ ತಾನೆ ಪ್ರೇತದಲ್ಲಿ ಪ್ರಕಟವಾಗುವುದು!

ನಾನು ವಿದ್ಯಾರ್ಥಿದೆಸೆಯಲ್ಲಿ ಬರೆದ 'ಭೀಮಕಾಯ'ವನ್ನು ಹುಬ್ಬಳ್ಳಿಯಲ್ಲಿ ಉಪನ್ಯಾಸಕನಾಗಿ ಸೇರಿದ ಹೊಸತರಲ್ಲಿ ಕುಮಟಾದ ಸುಲಭ ಸಾಹಿತ್ಯ ಪ್ರಕಾಶನದವರು ಪ್ರಕಟಿಸಲು ಒಪ್ಪಿದರು. ಅಷ್ಟರಲ್ಲಿ ಎಂದರೆ ೧೯೬೦ರಲ್ಲಿ 'ಧರ್ಮಶ್ರೀ'ಯನ್ನು ಬರೆದೆ. ಇದನ್ನೂ ಅವರು ಪ್ರಕಟಿಸುವರೋ ಇಲ್ಲವೋ ಎಂಬ ಅನುಮಾನದಲ್ಲಿ ನಾನೇ ಅವರನ್ನು ಕೇಳಲಿಲ್ಲ. 'ಧರ್ಮಶ್ರೀ'ಯು 'ಭೀಮಕಾಯ'ಕ್ಕಿಂತ ಪ್ರಬುದ್ಧವಾದ ಬರವಣಿಗೆ ಎಂದು ಎರಡೂ ಹಸ್ತಪ್ರತಿಗಳನ್ನು ಓದಿದ್ದ ಶ್ರೀನಿವಾಸ ತೋಫಖಾನೆಯವರು ಹೇಳಿದುದು ಮಾತ್ರವಲ್ಲ, ನನಗೂ ಹಾಗನ್ನಿಸುತ್ತಿತ್ತು. ಮೈಸೂರು, ಬೆಂಗಳೂರುಗಳಲ್ಲಿ ಯಾವುದಾದರೂ ಪ್ರಸಿದ್ಧ ಪ್ರಕಾಶನಕ್ಕೆ ಬರೆದು ಕೇಳುವ

ಮನಸ್ಸು ನನಗಾಯಿತು. ಆದರೆ ಹೆಸರಿಲ್ಲದ ಲೇಖಕನ ಕಾಗದಕ್ಕೆ ಯಾರೂ ಪುರಸ್ಕಾರಯುತ ಉತ್ತರ ಬರೆಯುವುದಿಲ್ಲವೆಂದು ಬುದ್ಧಿ ಹೇಳಿತು. ಹೀಗೆ ಕೆಲವು ದಿನಗಳು ಕಳೆದವು. ಅಷ್ಟರಲ್ಲಿ ನನಗೆ ಪಿ.ಎಲ್. ನಾಯಕರ ಪರಿಚಯವಾಗಿತ್ತು. ಅವರ ಹಿರಿಯ ಮಗಳು ಗೀತಾ ನನ್ನ ಕಾಲೇಜಿನಲ್ಲಿ ಸೀನಿಯರ್ ಬಿ.ಎ., ಓದುತ್ತಿದ್ದು ನಾನು ಆ ತರಗತಿಗೆ ಮನಃಶಾಸ್ತ್ರ ಕಲಿಸುತ್ತಿದ್ದೆ. ಕಾರ್ಪೊರೇಷನ್ ಬ್ಯಾಂಕಿನ ಮ್ಯಾನೆಜರರಾಗಿದ್ದ ನಾಯಕರು ವಿದ್ಯಾರ್ಥಿದಶೆಯಲ್ಲಿ ಇಂಟರ್ ಮೀಡಿಯೆಟ್ ಮುಗಿಸಿದ್ದವರು. ಈಗ ಮಗಳು ಓದುವ ಪುಸ್ತಕಗಳನ್ನು ನೋಡಿದ ಮೇಲೆ ಅವರಿಗೆ ಬಿ.ಎ., ಮಾಡಬೇಕೆಂಬ ಮನಸ್ಸು ಹುಟ್ಟಿತು. ಅವರ ಬ್ಯಾಂಕು ಶುರುವಾಗುತ್ತಿದ್ದುದು ಹತ್ತೂವರೆಗೆ. ನಮ್ಮ ಕಾಲೇಜು ಬೆಳಗ್ಗೆ ಏಳರಿಂದ ಹನ್ನೊಂದರವರೆಗೆ. ಬೆಳಗ್ಗೆ ಹಾಜರಿ ಕೊಟ್ಟು ಯಾಕೆ ಓದಬಾರದು? ಎಂದು ನಿಶ್ಚಯಿಸಿ ಸೇರಿಯೇಬಿಟ್ಟರು. ನನ್ನ ಮನಃಶಾಸ್ತ್ರದ ತರಗತಿ ಹತ್ತರಿಂದ ಹನ್ನೊಂದರ ತನಕ. ನನ್ನಲ್ಲಿ ಬಂದು ತಮಗೆ ಪ್ರತಿದಿನ ಹಾಜರಿ ಕೊಡಬೇಕೆಂದೂ ಜತೆಗೆ ಭಾನುವಾರ ಮಾರ್ಗದರ್ಶನ ಮಾಡಿ ತಾವು ಮನೆಯಲ್ಲಿ ಓದಿಕೊಳ್ಳಲು ನೆರವು ನೀಡಬೇಕೆಂದೂ ಕೇಳಿಕೊಂಡರು. ಅವರ ಇಂಗ್ಲಿಷ್ ಭಾಷೆ ಚೆನ್ನಾಗಿತ್ತು. ವರ್ತನೆ ಸುಸಂಸ್ಕೃತ ವಾಗಿತ್ತು. ನಾನು ಒಪ್ಪಿಕೊಂಡೆ. ಹೀಗಾಗಿ ಸ್ನೇಹವಾಯಿತು. ನಾನೊಂದು ಕಾದಂಬರಿ ಬರೆಯು ತ್ತಿದ್ದುದು ಅವರಿಗೆ ಗೊತ್ತಿತ್ತು. ಅದು ಮುಗಿದದ್ದೂ ಗೊತ್ತಿತ್ತು. ನಾನು ಪ್ರಕಾಶಕರನ್ನು ಹುಡುಕು ತ್ತಿದ್ದೇನೆ ಎಂದು ನಾನೇ ಹೇಳಿದೆ. ನಾನು ಗೊತ್ತುಮಾಡ್ತೀನಿ, ಬಿಡಿ ಎಂದರು. ಆಗ ಹುಬ್ಬಳ್ಳಿಯಲ್ಲಿ ಮಾತ್ರ ಇದ್ದ 'ಸಾಹಿತ್ಯ ಭಂಡಾರ'ದ ಬ್ಯಾಂಕ್‌ಖಾತೆ ನಾಯಕರ ಕಾರ್ಪೊರೇಷನ್ ಬ್ಯಾಂಕಿನಲ್ಲಿತ್ತು. ಗೋವಿಂದರಾಯರ ಪರಿಚಯವಿತ್ತು. ಒಂದು ದಿನ ಅವರನ್ನು ಭೇಟಿ ಮಾಡಿ ನಾಯಕರು ಕೇಳಿದರು: 'ನಮ್ಮ ಗುರುಗಳು ಒಂದು ಕಾದಂಬರಿ ಬರೆದಿದ್ದಾರೆ. ನೀವು ಪ್ರಕಟಿಸಬೇಕು.'

'ಹಸ್ತಪ್ರತಿ ತಂದುಕೊಡಿ. ನೋಡಿ ಹೇಳ್ತೀನಿ.'

'ನಮ್ಮ ಗುರುಗಳು ಬರೆದದ್ದು ಅಂದ ಮೇಲೆ ಅತ್ಯುತ್ತಮವಾಗೇ ಇದೆ ಅಂತ ತಿಳಕೊಳ್ಳಿ.'

'ಆದರೂ ನಾವು ಹಸ್ತಪ್ರತಿ ನೋಡಿಯೇ ಹೇಳ್ತೀವಿ.'

'ನೀವು ಅದನ್ನ ತಿರಸ್ಕರಿಸೂದಿಲ್ಲ ಅಂತ ಮಾತು ಕೊಟ್ಟರೆ ತಂದುಕೊಡ್ತೀನಿ.'

'ನೀವು ಬೇಡ ಅನ್ನೂದಿಲ್ಲ ಅಂತ ಮಾತು ಕೊಟ್ಟರೆ ಮಾತ್ರ ಹೆಣ್ಣು ತೋರಿಸುತೀವಿ ಅಂದ ಹಾಗಿದೆ ನಿಮ್ಮ ಕರಾರು.'

'ಆಯಿತು. ನಿಮಗೆ ದುಡ್ಡು ಬೇಕಾದರೆ ಬ್ಯಾಂಕಿನಿಂದ ಸಾಲ ಕೊಡುತ್ತೇನಿ. ಪೇಪರ್ ಬೇಕಾದರೆ, ಅದರ ಏಜಂಟ್ ನಮ್ಮ ಗಿರಾಕಿ, ಸಾಲ ಕೊಡಿಸುತೀನಿ.'

'ನೀವು ಏನೇನು ಕೊಟ್ಟರೂ ನಾವು ತಗೋತೀವಿ. ಆದರೆ ಹಸ್ತಪ್ರತಿ ಓದಿದ ಮೇಲೆಯೇ ಪ್ರಕಟಿಸೂದು ಬಿಡೂದು ಹೇಳುತೀವಿ.'

'ಈ ಗೋವಿಂದರಾವ್ ಮಹಾ ಜಿಗುಟು ಮನುಷ್ಯರು. ಆದರೆ ಹಸ್ತಪ್ರತಿಯನ್ನು ಕೊಟ್ಟು ನೋಡೋಣ, ಪರೀಕ್ಷೆಯೇ ಬೇಡ ಅಂದರೆ ಡಿಗ್ರಿಯೇ ಸಿಕ್ಕೂದಿಲ್ಲ ಅನ್ನುವ ಹಾಗಿದೆ ಅವರ ಕರಾರು' ಎಂದು ನಾಯಕರು ನನಗೆ ಹೇಳಿದರು.

'ಬಿಟ್ಟು ತೋರಿಸಿ. ಅದಕ್ಯಾಕೆ ನಾವು ಪಿರುಕಣೆ ಮಾಡಬೇಕು?' ನಾನೆಂದೆ.

'ನಮ್ಮ ಗುರುಗಳು ಅಂತ ನಾನು ಹೇಳಿಯೂ ಆತ ಹಟ ಮಾಡ್ತಿದ್ದಾರಲ್ಲ ಅಂತ.'

ನಾನೇ ಸಮಾಧಾನ ಹೇಳಿ ಅವರೊಡನೆ ಹಸ್ತಪ್ರತಿ ಕಳಿಸಿದೆ.

ಒಂದು ವಾರದ ಅನಂತರ ಸುಮಾರು ಐವತ್ತು ವರ್ಷದ ಒಣ ಮೈಕಟ್ಟಿನ ಖಾದಿ ಪಂಚೆ ಶರಟುಗಳ ಒಬ್ಬ ವ್ಯಕ್ತಿಯು ನಮ್ಮ ಮನೆಯ ಮುಂದೆ ಸೈಕಲ್ಲಿಂದ ಇಳಿದು ಒಳಗೆ ಬಂದರು. 'ನನ್ನ ಹೆಸರು ಗೋವಿಂದರಾವ್ ಅಂತ. ಸಾಹಿತ್ಯ ಭಂಡಾರ,' ಎಂದು ಪರಿಚಯ ಹೇಳಿಕೊಂಡು ಒಳಗೆ ಬಂದು ಕುಳಿತ ಅನಂತರ, 'ನಿಮ್ಮ ಕಾದಂಬರಿ ನನಗೆ ಒಪ್ಪಿಗೆಯಾಗಿದೆ. ನಾವು ಪ್ರಕಟಿಸುತೀವಿ. ನೀವು ದಯವಿಟ್ಟು ಒಪ್ಪಿಗೆ ಕೊಡಬೇಕು' ಎಂದರು.

ನನಗೆ ಆಶ್ಚರ್ಯವಾಯಿತು. ನನ್ನನ್ನು ದಯವಿಟ್ಟು ಒಪ್ಪಿಗೆ ಕೊಡುವಂತೆ ಕೇಳುತ್ತಿದ್ದಾರೆ. ನಾನು ಅಷ್ಟು ದೊಡ್ಡ ಕಾದಂಬರಿಕಾರನೆ? ಎನ್ನಿಸಿತು. 'ನಾನೇ ನಿಮ್ಮನ್ನು ಕೇಳಿದೀನಿ. ಇನ್ನು ನನ್ನ ಒಪ್ಪಿಗೆ ಕೇಳುವ ಪ್ರಶ್ನೆ ಎಲ್ಲಿದೆ?' ಎಂದೆ.

ನಿಮ್ಮ ಪರವಾಗಿ ಒಬ್ಬರು ಕೇಳಿದ್ದಾರೆ. ಯಾರ ಪ್ರಸ್ತಾಪವಾದರೂ ಒಬ್ಬ ಮಧ್ಯಸ್ಥರೋರ ಮೂಲಕ ತಾನೆ ಆಗೋದು? ಈಗ ಎದುರಾಎದುರು ಮಾತಾಗಬೇಕು. ನೀವು ದಯವಿಟ್ಟು ನಮಗೆ ಕೊಡಬೇಕು.'

'ಆಯ್ತು.'

'ಮೂರೂವರೆ ಅಥವಾ ನಾಲ್ಕು ರೂಪಾಯಿ ಕಿಮ್ಮತ್ತು ಇಡುತೀವಿ. ಒಂದು ಸಾವಿರ ಪ್ರತಿ. ಪುಸ್ತಕ ಪ್ರಕಟವಾದ ಎರಡು ಮೂರು ತಿಂಗಳಿನಲ್ಲಿ ನಿಮಗೆ ಒಟ್ಟಿಗೆ ಇನ್ನೂರು ರೂಪಾಯಿ ಕೊಡ್ತೀವಿ. ಸಮ್ಮತಿಯೇ?'

'ಆಯ್ತು' ಎಂದೆ.

ಅವರಾಗಲೇ ಕರ್ನಾಟಕದಲ್ಲಿ ಗಟ್ಟಿ ಹೆಸರು ಮಾಡಿದ್ದ ಪ್ರಕಾಶಕರಾಗಿದ್ದರು. ಆದರೂ ಯಾವ ಹೆಸರೂ ಇಲ್ಲದ ನನ್ನನ್ನು ಹೇಳಿ ಕಳಿಸಿ ಅವರ ಅಂಗಡಿಗೆ ಕರೆಸಿಕೊಳ್ಳದೇ ತಾವೇ ನನ್ನ ಮನೆಯನ್ನು ಹುಡುಕಿಕೊಂಡು ಬಂದಿದ್ದರು. ಅವರ ಈ ವಿನಯ ಮತ್ತು ನೇರವಾದ ಮಾತುಕತೆಗಳು ನನಗೆ ಹಿಡಿಸಿದವು.

೧೯೬೦ ಅಕ್ಟೋಬರಿನಲ್ಲಿ ನಾನು ಹುಬ್ಬಳ್ಳಿಯನ್ನು ಬಿಟ್ಟು ಗುಜರಾತಿನ ಸರ್ದಾರ್ ಪಟೇಲ್ ವಿಶ್ವವಿದ್ಯಾಲಯದ ತತ್ತ್ವಶಾಸ್ತ್ರದ ಸ್ನಾತಕೋತ್ತರ ವಿಭಾಗದಲ್ಲಿ ಉಪನ್ಯಾಸಕನಾಗಿ ಸೇರಿದೆ. ಎರಡು ವರ್ಷದಲ್ಲಿ ನನ್ನ ಪಿಎಚ್.ಡಿ.ಯೂ ಮುಗಿದು ಹೊಸದಾಗಿ ಆರಂಭವಾಗಿದ್ದ ನನ್ನ ವಿಭಾಗವನ್ನು ಕಟ್ಟಿ ಬೆಳೆಸಲು ನಾನು ಸಾಕಷ್ಟು ಶ್ರಮಿಸಿದ್ದೆ. ಆ ವೇಳೆಗೆ ಉಪಕುಲಪತಿಯಾಗಿ ಬಂದ ಈಶ್ವರಭಾಯಿ ಪಟೇಲರು, ಬೇರೆಯವರ ಮೇಲೆ ಮುಯ್ಯಿ ತೀರಿಸಿಕೊಳ್ಳುವ ಕಾರಣದಿಂದ ತತ್ತ್ವಶಾಸ್ತ್ರ ಮತ್ತಿತ್ತರ ಕೆಲವು ವಿಭಾಗಗಳನ್ನು ಮುಚ್ಚಬೇಕೆಂದು ಮಾಡಿದರು. ಇದೀ ಪರಿಸ್ಥಿತಿಯು ನನ್ನಲ್ಲಿ ಅಸಹ್ಯವನ್ನು ಹುಟ್ಟಿಸಿತು. ಯಾವ ಸಂಸ್ಥೆಯಲ್ಲೂ ಯಾರ ಕೈಕೆಳಗೂ ನೌಕರಿ ಮಾಡುವುದು ಬೇಡವೆಂಬ ತೀರ್ಮಾನ ನನ್ನಲ್ಲಿ ಹುಟ್ಟಿತು. ನಾನೇ ಒಂದು ಸ್ವಂತ ವ್ಯಾಪಾರವನ್ನು ಪ್ರಾರಂಭಿಸಿ ಜೀವಿಸಬೇಕೆಂದು ನಿಶ್ಚಯಿಸಿದೆ. ಬೇರೆ ಯಾವ ವ್ಯಾಪಾರವೂ ಸಾಧ್ಯವಿರಲಿಲ್ಲ. ಕರ್ನಾಟಕಕ್ಕೆ ಬಂದು ಎಲ್ಲಾದರೂ ಒಂದು ಸಣ್ಣ ಹೋಟೇಲಿಡಬೇಕೆಂದು ನಿಶ್ಚಯಿಸಿ ಗುಜರಾತಿನ ತಿಂಡಿ

ತಿನಿಸುಗಳನ್ನು ತಯಾರಿಸುವ ಪರಿಣತಿ ಪಡೆಯಲು ನಾನೂ ಸರಸ್ವತಿಯೂ ತೊಡಗಿದೆವು.

ಈ ಪರಿಸ್ಥಿತಿಯಲ್ಲಿ ನನ್ನ ಭಾವನೆ ಮತ್ತು ಸಾಹಿತ್ಯಾಕಾಂಕ್ಷೆಗಳನ್ನು ಅರ್ಥಮಾಡಿಕೊಂಡು ಕಾಯೇನ ವಾಚಾ ಮನಸಾ ಸಹಾಯಕ್ಕೆ ನಿಂತವರು 'ಸಾಹಿತ್ಯ ಭಂಡಾರ'ದ ಗೋವಿಂದ ರಾಯರು. ಅಷ್ಟರಲ್ಲಿ ನನ್ನ ಅವರ ವ್ಯವಹಾರವು ಪರಸ್ಪರ ನಂಬಿಕೆ ಗೌರವಗಳಿಗೆ ತಿರುಗಿತ್ತು. ನೌಕರಿ ಹೋಗುವ ಸಂದರ್ಭವನ್ನು ನಾನು ಅವರಿಗೆ ಮೊದಲು ತಿಳಿಸಿಯೇ ಇರಲಿಲ್ಲ. ಹೋಟೇಲಿ ಡಬೇಕೆಂದು ನಿಶ್ಚಯಿಸಿ, ಗುಜರಾತಿನ ತಿನಿಸುಗಳನ್ನು ತಯಾರಿಸುವಲ್ಲಿ ಪರಿಣತಿ ಸಂಪಾದಿಸಲು ತೊಡಗಿದ ಅನಂತರ ಒಂದು ದಿನ ಅವರಿಗೆ ವಿವರವಾಗಿ ಕಾಗದ ಬರೆದೆ. ಗೋವಿಂದರಾಯರು ಸಾಧಾರಣವಾಗಿ ಪತ್ರಗಳಿಗೆ ಉತ್ತರಿಸುತ್ತಿದ್ದುದು ವಿಳಂಬವಾಗಿ. ತುಂಬ ವಿಳಂಬವಾಗಿ, ಒಮ್ಮೊಮ್ಮೆ ನನಗೆ ಬೇಸರವುಂಟಾಗುವಷ್ಟು ವಿಳಂಬವಾಗಿ. ಆದರೆ ಈ ಕಾಗದ ತಲುಪಿದ ತತ್‌ಕ್ಷಣ ಉತ್ತರಿಸಿದರು: 'ನೀವು ತಿಳಿಸಿದ ಪರಿಸ್ಥಿತಿ ನನಗೆ ಅರ್ಥವಾಗುತ್ತದೆ. ನೀವು ಜೀವನದಲ್ಲಿ ಬೇಕಾದಷ್ಟು ಜಂಜಾಟ ಪಟ್ಟಿದ್ದೀರಿ. ನಾನೂ ಪಟ್ಟಿದ್ದೇನೆ. ಪಡುತ್ತಿದ್ದೇನೆ. ಆದ್ದರಿಂದ ನಿಮಗೆ ನಾನು ಸಮಾಧಾನದ, ಧೈರ್ಯ ತುಂಬುವ ಮಾತು ಬರೆಯುವುದು ಅನಾವಶ್ಯಕ. ನಾನು ದಕ್ಷಿಣ ಕನ್ನಡ ಜಿಲ್ಲೆಯವನು. ನನ್ನ ಸಂಬಂಧಿಕರಲ್ಲಿ ಎಷ್ಟೋ ಜನ ಹೋಟೇಲು ನಡೆಸುತ್ತಿದ್ದಾರೆ. ಅವರ ಕಷ್ಟ, ಸುಖಗಳು ನನಗೂ ಗೊತ್ತು. ನಾನು ಆ ಕೆಲಸಕ್ಕೆ ಹೋಗದೆ ಪುಸ್ತಕ ಪ್ರಕಾಶನ ಮತ್ತು ವ್ಯಾಪಾರಕ್ಕೆ ಬಿದ್ದೆ. ಸದ್ಯದಲ್ಲೇ ನಾನು ಸಾಕಷ್ಟು ಕಡೆ ವಿಚಾರಿಸಿ ನಿಮಗೆ ಖಚಿತವಾದ ಒಂದು ವ್ಯವಹಾರವನ್ನು ಪ್ರಸ್ತಾಪಿಸಿ ಬರೆಯುತ್ತೇನೆ. ನಿಶ್ಚಿಂತರಾಗಿರಿ' ಎಂದು ಬರೆದರು. ಒಂದು ವಾರದ ಅನಂತರ, 'ನಿಮ್ಮ ಕೆಲಸಕ್ಕಾಗಿಯೇ ವಿಚಾರಿಸುತ್ತಿದ್ದೇನೆ. ಸಂಚಾರವನ್ನೂ ಮಾಡುತ್ತಿದ್ದೇನೆ. ಕೆಲಸ ಎಲ್ಲಾದರೊಂದು ಕಡೆ ಆಗುತ್ತದೆ. ಆತುರಪಡಬಾರದು' ಎಂದು ಬರೆದರು. ಮತ್ತೆ ಒಂದು ತಿಂಗಳಿನ ಅನಂತರ ಇನ್ನೊಂದು ಕಾಗದ: 'ಹಾವೇರಿಯಲ್ಲಿ ಒಬ್ಬರು ಒಂದು ಸಣ್ಣ ಹೋಟೇಲು ನಡೆಸುತ್ತಿದ್ದಾರೆ. ವ್ಯಾಪಾರ ಚೆನ್ನಾಗಿದೆ. ಅವರೀಗ ಹುಬ್ಬಳ್ಳಿಯಲ್ಲೊಂದು ಹೋಟೇಲು ಮತ್ತು ಲಾಡ್ಜ್ ಶುರುಮಾಡಿರುವುದರಿಂದ ಎರಡನ್ನೂ ನೋಡಿಕೊಳ್ಳಲು ಆಸಾಮಿಗಳಿಲ್ಲದ್ದ ರಿಂದ ಹಾವೇರಿಯದನ್ನು ಮಾರಲು ನಿಶ್ಚಯಿಸಿದ್ದಾರೆ. ನಾನು ನಿಮ್ಮ ವಿಷಯ ಹೇಳಿದೆ. ನಿಮ್ಮ ಪುಸ್ತಕಗಳನ್ನು ಓದಿರುವ ಅಭಿಮಾನಿಗಳು ಅವರು. ನಿಮ್ಮಲ್ಲಿರುವ ಪ್ರಾವಿಡೆಂಟ್ ಫಂಡ್ ಹಣ ಐದು ಸಾವಿರ ರೂಪಾಯಿಗಳನ್ನು ತೆಗೆದುಕೊಳ್ಳುತ್ತಾರೆ. ನಿಮ್ಮನ್ನು ಈ ಹೋಟೇಲ್‌ನಲ್ಲಿ ಅವರ ಕೈಕೆಳಗೆ ಆರು ತಿಂಗಳು ದುಡಿಸಿ, ತರಬೇತಿ ಕೊಟ್ಟು, ಅನಂತರ ಪಾತ್ರೆ ಪರಟೆ ಕುರ್ಚಿ ಮೇಜು ಹೆಸರುಗಳ ಸಮೇತ ವಹಿಸಿಕೊಡುತ್ತಾರೆ. ಅವರ ಉಳಿದ ಹಣವನ್ನು ನೀವು ಪ್ರತಿ ತಿಂಗಳೂ ಇಷ್ಟಿಷ್ಟು ಎಂಬ ಲೆಕ್ಕದಲ್ಲಿ ಸುಮಾರು ಮೂರು ವರ್ಷದಲ್ಲಿ ತೀರಿಸ ಬಹುದು. ಇಷ್ಟು ಅನುಕೂಲವಾದ ಪ್ರಸ್ತಾವನೆ ಸಿಕ್ಕಿರುವುದು ನಮ್ಮ ಅದೃಷ್ಟ. ಬೇರೆ ದಾರಿ ಏನಾದರೂ ಇದ್ದರೆ ಅದನ್ನು ಹುಡುಕಲು ನಾನು ಮುಂದಿನವಾರ ದಕ್ಷಿಣ ಕನ್ನಡ ಜಿಲ್ಲೆಗೆ ಹೋಗಿ ಬಂದು ಅನಂತರ ಬರೆಯುತ್ತೇನೆ.'

ದಕ್ಷಿಣ ಕನ್ನಡಕ್ಕೆ ಹೋಗಿ ಬಂದ ಅನಂತರ ಬರೆದರು: 'ನನ್ನ ಸ್ನೇಹಿತರು ಮತ್ತು ಹಳೆಯ ಪರಿಚಯದವರಲ್ಲೆಲ್ಲ ನಿಮ್ಮ ವಿಷಯ ಹೇಳಿ ವಿಚಾರಿಸಿದೆ. ದಕ್ಷಿಣ ಕನ್ನಡದ ಒಂದು

ಸಣ್ಣ ಊರಿನಲ್ಲೊಂದು ಹೈಸ್ಕೂಲಿದೆ. ಅದರ ಮುಖ್ಯೋಪಾಧ್ಯಾಯರ ಕೆಲಸವನ್ನು ನಿಮಗೆ ಕೊಟ್ಟು ನಿಮ್ಮನ್ನು ತಮ್ಮ ಊರಿನಲ್ಲಿಟ್ಟುಕೊಳ್ಳಲು ಸಮಿತಿಯವರು ಸಂತೋಷದಿಂದ ಒಪ್ಪಿದ್ದಾರೆ. ನಿಮಗಿರುವ ವಿದ್ಯಾರ್ಹತೆಗೆ ಅದು ಕಡಿಮೆ ಎನ್ನಿಸಿದರೂ ನೀವೊಬ್ಬ ಸಮರ್ಥ ಉಪಮುಖ್ಯೋಪಾಧ್ಯಾಯರನ್ನು ಇಟ್ಟುಕೊಂಡು ದಿನಕ್ಕೆ ಎರಡು ಮೂರು ಗಂಟೆ ಮಾತ್ರ ಶಾಲಾಕೆಲಸಕ್ಕೆ ವಿನಿಯೋಗಿಸುತ್ತಾ ಉಳಿದಂತೆ ಸಾಹಿತ್ಯದ ಓದು ಬರಹಗಳನ್ನು ಮಾಡಬಹುದು. ಹಾಗೆಂದು ಸಮಿತಿಯವರೇ ಹೇಳಿದರು. ಹೋಟೇಲಿನಲ್ಲಿ ಲಾಭವಿದೆ. ಕ್ರಮೇಣ ಬೇಕಾದಷ್ಟು ಗಳಿಸಲೂ ಬಹುದು. ಲೇಖರಿಸಲೂಬಹುದು. ಆದರೆ ಸದಾ ಗಮನ ಕೊಡದಿದ್ದರೆ ಗುಣಮಟ್ಟ ಉಳಿಯುವುದಿಲ್ಲ. ನಷ್ಟವೂ ಆಗುತ್ತದೆ. ನಿಮ್ಮ ಸಾಹಿತ್ಯ ಸೃಷ್ಟಿಗೆ ಅದರಿಂದ ಹಾನಿಯಾಗುತ್ತದೆ. ಈ ಹೈಸ್ಕೂಲು ಕೆಲಸವೇ ಸೂಕ್ತವಾದದ್ದೆಂದು ನನ್ನ ಅಭಿಪ್ರಾಯ. ತತ್‌ಕ್ಷಣ ಉತ್ತರ ಬರೆಯಿರಿ.'

'ಹಾವೇರಿಯ ಹೋಟೇಲನ್ನೇ ನನಗೆ ನಿಶ್ಚಯಿಸಿ. ಇನ್ನೂ ಒಂದು ವರ್ಷ ಇಲ್ಲಿ ಮುಂದುವರಿಯುವ ಅವಕಾಶವಿದ್ದರೂ ನನಗೆ ಕಾಲಹರಣ ಮಾಡುವ ಇಷ್ಟವಿಲ್ಲ. ಬೇಗ ಅಲ್ಲಿಗೆ ಬಂದು ಅವರಿಂದ ತರಬೇತಿ ಪಡೆದು ಹೋಟೇಲನ್ನು ವಹಿಸಿಕೊಳ್ಳುತ್ತೇನೆ. ವಾಸಕ್ಕೊಂದು ಸಣ್ಣ ಮನೆಯನ್ನೂ ಹುಡುಕಿಸಿರಿ. ಇಲ್ಲಿ ನೌಕರಿ ಬಿಟ್ಟ ತತ್‌ಕ್ಷಣ ವಿಶ್ವವಿದ್ಯಾಲಯದ ಮನೆಯನ್ನೂ ಖಾಲಿ ಮಾಡಿಸುತ್ತಾರೆ' ಎಂದು ನನ್ನ ತೀರ್ಮಾನವನ್ನು ತಿಳಿಸಿದೆ.

ಆದರೆ ಒಂದು ತಿಂಗಳಿನ ಅನಂತರ, ದಿಲ್ಲಿಯ ರಾಷ್ಟ್ರೀಯ ಶಿಕ್ಷಣ ಮತ್ತು ಸಂಶೋಧನಾ ಸಂಸ್ಥೆಯಲ್ಲಿ ರೀಡರ್ ಹುದ್ದೆಗೆ ಬರುವಂತೆ ತಾನಾಗಿಯೇ ಒಂದು ಆಹ್ವಾನ ಬಂತು. ಇನ್ನು ನೌಕರಿ ಮಾಡುವುದಿಲ್ಲ. ಹೋಟೇಲನ್ನೇ ನಡೆಸುತ್ತೇನೆ ಎಂಬ ಹಟದಲ್ಲೇ ನಾನಿದ್ದೆ. ಹೋಟೇಲು ವ್ಯವಹಾರ ಮಾಡಿಕೊಂಡು ಗಂಭೀರ ಸಾಹಿತ್ಯ ಸೃಷ್ಟಿಗೆ ಬೇಕಾದ ಮಗ್ನತೆಯನ್ನು ಉಳಿಸಿಕೊಳ್ಳುವುದು ಸಾಧ್ಯವಿಲ್ಲವೆಂದು ನನ್ನ ಗುರುಗಳಾದ ಬರೋಡಾ ವಿಶ್ವವಿದ್ಯಾಲಯದ ಡಾ|| ಜಾವಡೇಕರ್ ಅವರು ತಿಳಿಯಹೇಳಿ ಒತ್ತಾಯ ಮಾಡಿದರು. ಎರಡು ವಾರದಲ್ಲಿ ಅವರ ಬುದ್ಧಿವಾದವು ನನಗೂ ಸೂಕ್ತವೆನ್ನಿಸಿತು. ಗುಜರಾತು ಬಿಟ್ಟು ದಿಲ್ಲಿಗೆ ಹೋದೆ.

'ಭೀಮಕಾಯ'ವು ಕುಮಟಾದ ಸುಲಭ ಸಾಹಿತ್ಯ ಪ್ರಕಾಶನದಿಂದ, 'ಮತದಾನ'ದ ಮೊದಲ ಮುದ್ರಣವು ಬೆಳಗಾವಿಯ ಶರತ್ ಪ್ರಕಾಶನದ ಧರಮಟ್ಟಿಯವರಿಂದ ಆದದ್ದನ್ನು ಬಿಟ್ಟರೆ ನನ್ನ ಎಲ್ಲ ಪುಸ್ತಕಗಳ ಪ್ರಕಾಶನ, ಮರುಮುದ್ರಣಗಳೂ ಗೋವಿಂದರಾಯರಿಂದಲೇ ಆಗಿವೆ. 'ಧರ್ಮಶ್ರೀ'ಗೆ ನಾಲ್ಕು ರೂಪಾಯಿ ಬೆಲೆ ಇಟ್ಟು ಇನ್ನೂರು ರೂಪಾಯಿ ಸಂಭಾವನೆ ಕೊಟ್ಟರು. 'ದೂರಸರಿದರು'ವಿಗೆ ಮುನ್ನೂರು ಕೊಟ್ಟರೆಂದು ನೆನಪು. ಅನಂತರ ಶೇಕಡಾ ಲೆಕ್ಕದ ಮೇಲೆ ಕೊಡುವುದೆಂದು ನಾವಿಬ್ಬರೂ ಕೂಡಿ ಮಾತನಾಡಿಕೊಂಡೆವು. ಅಲ್ಲಿಂದ ಇಲ್ಲಿಯವರೆಗೆ ಅದೇ ಲೆಕ್ಕದಲ್ಲಿ ನಡೆದುಕೊಂಡು ಬಂದಿದೆ. ಹಣಕೊಟ್ಟು ಕೊಂಡವರು ಹಲವಾರು ದಶಕಗಳಾದರೂ ಪುಸ್ತಕವನ್ನು ಇಟ್ಟುಕೊಳ್ಳುವಂತಹ ಒಳ್ಳೆಯ ಕಾಗದ ಬಳಸಬೇಕೆಂಬುದು ಗೋವಿಂದರಾಯರ ನಿಯಮವಾಗಿತ್ತು. ಒಂದೂ ತಪ್ಪು ಉಳಿಯದಂತೆ ಪ್ರೂಫ್ ತಿದ್ದುವುದೂ ಅವರ ಕ್ರಮ. ಕರ್ನಾಟಕದ ಹೊರಗೇ ಇದ್ದುದರಿಂದ ನಾನು ಕೊನೆ ಕರಡನ್ನು ಕೂಡಾ ನೋಡುತ್ತಿರಲಿಲ್ಲ. ಸಂಯುಕ್ತ ಪದಗಳ ನಡುವೆ ಹೈಫನ್ ಸೇರಿಸುವುದು ಅವರ ಹಳೆ ಪದ್ಧತಿ. ಹೀಗೆ ಸೇರಿಸಬೇಡಿ,

ನೋಡಲು ಚೆನ್ನಾಗಿ ಕಾಣುವುದಿಲ್ಲ ಎಂದು ನಾನು ಎಷ್ಟು ಹೇಳಿದರೂ ಕೇಳುತ್ತಿರಲಿಲ್ಲ. ನಾನು ಬರೆದದ್ದರಲ್ಲಿ ಕರ್ತೃ ಕ್ರಿಯಾ ಪದಗಳು, ಲಿಂಗ ವಚನ ಭೇದಗಳು ಸರಿಯಾಗಿವೆಯೇ ಎಂಬ ದೃಷ್ಟಿಯಿಂದ ಹಸ್ತಪ್ರತಿಯನ್ನು ನೋಡುತ್ತಿದ್ದರು. ಇಲ್ಲಿ ಕರ್ತೃಪದವೇ ಇಲ್ಲದೆ ವಾಕ್ಯರಚನೆ ಮಾಡಿದ್ದೀರಲ್ಲ? ಎಂದು ನನಗೆ ಪತ್ರ ಬರೆಯುತ್ತಿದ್ದರು. ಆಧುನಿಕ ಗದ್ಯ ಸಾಗುತ್ತಿರುವುದೇ ಹೀಗೆ, ಅದನ್ನು ತಿದ್ದಬೇಡಿ ಎಂದು ನಾನು ಉತ್ತರ ಬರೆಯುತ್ತಿದ್ದೆ. ಆದರೂ ತಿದ್ದಿಬಿಡುತ್ತಿದ್ದರು. ಕಿಟೆಲ್ ಕೋಶವನ್ನು ಹತ್ತಿರ ಇಟ್ಟುಕೊಂಡೇ ಹಸ್ತಪ್ರತಿ ಓದುತ್ತಿದ್ದರು. ನಾನು ಬರೆದ ಶೈಲಿಯನ್ನಾಗಲಿ ಕಾಗುಣಿತವನ್ನಾಗಲಿ ನೀವು ಬದಲಿಸಲೇ ಕೂಡದು ಎಂದು ಒಂದು ಸಲ ಕಟ್ಟುನಿಟ್ಟಾಗಿ ಹೇಳಿದೆ. 'ನಮ್ಮ ಕಾಲದಲ್ಲಿ ಭಾಷೆಯ ನಿಯಮ...' ಎಂದರು. 'ಇದು ನಿಮ್ಮ ಕಾಲವಲ್ಲ. ನನ್ನ ಕಾಲ' ಎಂದೆ. ನಕ್ಕು ಸುಮ್ಮನಾದರು. ಆದರೂ ಅವರು ಏನೂ ತಿದ್ದದೆ ಸುಮ್ಮನಿರುತ್ತಾರೆಂಬ ನಂಬಿಕೆ ನನಗೆ ಪೂರ್ತಿ ಇರಲಿಲ್ಲ. ಉಳಿತಾಯದ ದೃಷ್ಟಿಯಿಂದ ಪುಟಕ್ಕೆ ಕನಿಷ್ಠ ಮೂವತ್ತು ಸಾಲು ತುರುಕುವುದೂ ಅವರ ಪದ್ಧತಿಯಾಗಿತ್ತು. ಪುಟದ ಎಡಭಾಗದ ಸಂಭಾಷಣೆಗೆಂದು:

'ಎಲ್ಲಿಗೆ ಹೊರಟೆ?'

'ಬೆಂಗಳೂರಿಗೆ.'

'ಯಾಕೆ?'

'ಕೆಲಸವಿತ್ತು.'

'ಏನು ಕೆಲಸ?'

'ನಿನಗೆ ಹೇಳುವುದಿಲ್ಲ.'

ಎಂಬಂತಹ ಅ.ನ.ಕೃ. ಸಂಭಾಷಣೆಯ ಒಂದು ಪುಸ್ತಕ ತೆಗೆದು ನನ್ನ ಮುಂದೆ ಹಿಡಿದು, 'ಲೇಖಕ ಪ್ರಕಾಶಕ ಇಬ್ಬರೂ ಸೇರಿ ಕಾಸು ಕೊಟ್ಟು ಕೊಳ್ಳುವ ಓದುಗನಿಗೆ ಮಾಡುವ ಮೋಸವಲ್ಲವೆ ಇದು? ಬಲಗಡೆ ಉದ್ದಕ್ಕೂ ಅವರಿಬ್ಬರೂ ಮಲಗಿ ಉರುಳಾಡುವಷ್ಟು ಖಾಲಿ ಜಾಗ ಯಾಕೆ ಬಿಡಬೇಕು?' ಎಂದು ನನ್ನನ್ನು ಕೇಳಿದರು. 'ಸಂಭಾಷಣೆ ಚುಟುಕಾಗಿದೆಯೇ ದೀರ್ಘವಾಗಿದೆಯೇ ಎಂಬುದು ಮುಖ್ಯವಲ್ಲ. ಅದರಲ್ಲಿ ಅರ್ಥದ ತೂಕವಿದೆಯೇ ಇಲ್ಲವೇ ಎನ್ನುವುದು ಮುಖ್ಯ.' ಎಂದು ನಾನು ಹೇಳಿದ್ದಕ್ಕೆ, 'ಇಂಥ ಸಂಭಾಷಣೆಯಲ್ಲಿ ಯಾವ ಅರ್ಥವಿದೆ? ಯಾವ ತೂಕವಿದೆ? ಇಂಥದ್ದನ್ನು ನಾನಂತೂ ಅಚ್ಚು ಮಾಡುವುದಿಲ್ಲ. ಕಾಸು ಕೊಡುವ ಓದುಗನಿಗೆ ಮೋಸ. ಕಾಗದದ ಅಭಾವವಿರುವ ಈ ದೇಶದಲ್ಲಿ ಕಾಗದದ ದಂಡ.' ಎಂದು ರೇಗಿದ ಧ್ವನಿಯಲ್ಲಿ ಹೇಳಿದರು ನಾನೇ ಅದರ ಲೇಖಕ ಎಂಬಂತೆ. ಜತೆಗೆ ಒಳ್ಳೆಯ ಮುಖಪುಟ ಬರೆಸಿ ಆಕರ್ಷಕ ಹೊದಿಕೆ ಮಾಡಿಸಿ ಹಾಕುತ್ತಿರಲಿಲ್ಲ. 'ಒಳಗಿನ ವಸ್ತು ಚೆನ್ನಾಗಿದ್ದರೆ ಹೊರಗೆ ಮುಲಾಮು ಸವರುವ ಅಗತ್ಯವಿಲ್ಲ' ಎಂಬುದು ಅವರ ಖಚಿತ ದೃಷ್ಟಿ.

'ಚಿನ್ನದ ಅಂಗಡಿಯಲ್ಲಿ ಹೋಗಿ ನೋಡಿ. ಹೊಸ ಆಭರಣಕ್ಕೆ ಮುಲಾಮು ಸವರಿಯೇ ಇರುತ್ತಾರೆ.' ನಾನು ವಾದಿಸಿದೆ.

'ಹೌದೋ?'

'ನಡೀರಿ ಆಭರಣದ ಅಂಗಡಿಗೆ. ನಾನು ತೋರಿಸುತೀನಿ.'

'ನಾನು ಆಭರಣದ ಅಂಗಡಿಯನ್ನು ನೋಡಿಯೇ ಇಲ್ಲ. ನೀವು ಹೇಳುವುದು ನಿಜವಿದ್ದರೂ ಇರಬಹುದು' ಎಂದು ನಕ್ಕರು.

ಊಟ ಮಾಡಿದ ಮೇಲೆ ತಟ್ಟೆಯು ತೊಳೆದು ಬೆಳಗಿದಂತಿರಬೇಕು. ಯಾರಾದರೂ ಒಂದು ಚೂರು ಚೆಲ್ಲಿದರೂ ಅವರು ಎಂದೂ ಸುಮ್ಮನಿರುತ್ತಿರಲಿಲ್ಲ. ಹೋಟೇಲ್‌ನಲ್ಲಿ ತಿಂದು ಬಂದು ಶಾಸ್ತ್ರಕ್ಕೆಂದು ಊಟಕ್ಕೆ ಕುಳಿತು ಅನ್ನವನ್ನು ಕೆದಕಿ ಕೈಬಿಟ್ಟರೂ ಅವರು ಸಹಿಸುತ್ತಿರಲಿಲ್ಲ. ಹಿಂದಿನ ಕಾಲದವರ ಶಿಸ್ತು ಮಾತ್ರವಲ್ಲ; ಚಿಕ್ಕ ವಯಸ್ಸಿನಿಂದ ಬಹು ಕಷ್ಟಪಟ್ಟು ಬೆಳೆದಿದ್ದರ ಪರಿಣಾಮ ಇದು. ಪುಸ್ತಕದ ಅಚ್ಚು, ಬೈಂಡಿಂಗ್ ಮೊದಲಾದವುಗಳಲ್ಲಿ ಕೂಡ ಈ ಮಿತವ್ಯಯ ವನ್ನು ಅನ್ವಯಿಸುವುದು ಅವರ ರೀತಿ. ಅವರನ್ನು ತಿದ್ದಿ ನನ್ನ ಪುಸ್ತಕಗಳ ಹೊರ ರೂಪ ತುಸು ಆಧುನಿಕವಾಗುವಂತೆ ಮಾಡಲು ನಾನು ಪದೇ ಪದೇ ಹೇಳಬೇಕಾಗುತ್ತಿತ್ತು.

ಅವರು ಪುಸ್ತಕದ ಪ್ರಕಟಣೆ ವ್ಯಾಪಾರಗಳನ್ನು ಆರಂಭಿಸಿದಾಗ ಈಗಿರುವಷ್ಟು ವಿತರಣಾ ವ್ಯವಸ್ಥೆ ಇರಲಿಲ್ಲ. ಪುಸ್ತಕಗಳನ್ನು ತಲೆಯ ಮೇಲೆ ಹೊತ್ತುಕೊಂಡು ಪುಸ್ತಕಾಸಕ್ತರಿದ್ದ ಊರುಗಳಿಗೆ ಹೋಗಿ ಮನೆ ಮನೆ ತಿರುಗಿ ಮಾರಬೇಕಾಗಿತ್ತು. ವರ್ಣರಂಜಿತ ಮುಖಚಿತ್ರ, ಜಾಹೀರಾತುಗಳನ್ನು ಅವರು ಕಾಣರು. ಈ ಹಿನ್ನೆಲೆಯನ್ನು ಅರಿತ ನಾನು ಅವರನ್ನು ಸಂಪೂರ್ಣ ಬದಲಾಯಿಸುವುದು ಸಾಧ್ಯವಿಲ್ಲವೆಂದು ಅರ್ಥಮಾಡಿಕೊಂಡೆ. ಒಬ್ಬ ಚಿತ್ರಕಾರರನ್ನು ಹಿಡಿದು ಅವನಿಗೆ ಕಲ್ಪನೆ ಕೊಟ್ಟು ಬರೆಸುವ ತಿಳಿವಳಿಕೆಯೂ ಅವರಿಗಿರಲಿಲ್ಲ. ನಾನು ಬರೆದುಕೊಟ್ಟು ಕರ್ನಾಟಕದ ಆಲಸಿ ಕಲಾವಿದರು ತಿಂಗಳುಗಟ್ಟಳೆ ಎಳೆಯುವುದು ಕಾರ್ಯಸಾಧುವಾಗಿರಲಿಲ್ಲ. ನಾನು ದಿಲ್ಲಿಯ ಒಬ್ಬಿಬ್ಬರು ಕಲಾವಿದರಿಗೆ ಹೇಳಿದೆ. ನನ್ನ ಕಲ್ಪನೆಯನ್ನು ಅರ್ಥಮಾಡಿಕೊಂಡು ಮೂರು ದಿನದಲ್ಲಿ ನಾಲ್ಕು ಬಗೆಯ ಚಿತ್ರಗಳನ್ನು ರಚಿಸಿ ನನಗೆ ತಂದು ತೋರಿಸಿದರು. ನಾನು ಬರೆದು ತೋರಿಸಿ ದಂತೆ ಅದರೊಳಗೆ ಕನ್ನಡ ಅಕ್ಷರಗಳನ್ನೂ ಸಂಯೋಜಿಸಿದ್ದರು. ಅದನ್ನು ಗೋವಿಂದರಾಯರಿಗೆ ಕಳಿಸಿಕೊಟ್ಟೆ. ಇನ್ನು ಮೇಲೆ ನೀವೇ ದಿಲ್ಲಿಯಿಂದ ಮಾಡಿಸಿ ಕಳಿಸಿಬಿಡಿ ಎಂದರು. ಆಮೇಲೆ ಬ್ಲಾಕುಗಳನ್ನು ಕೂಡ ದಿಲ್ಲಿಯಿಂದಲೇ ಮಾಡಿಸಿ ಕಳಿಸುತ್ತಿದ್ದೆ. ಬೆಂಗಳೂರಿಗಿಂತ ಅಲ್ಲಿ ಬೇಗ ಮತ್ತು ಹೆಚ್ಚು ನೈಪುಣ್ಯದಿಂದ ಕೆಲಸ ಮಾಡಿಕೊಡುತ್ತಿದ್ದರು. ಅಗ್ಗ ಕೂಡ.

ಈ ಕೆಲವು ಮಿತಿಗಳಿದ್ದರೂ ಗೋವಿಂದರಾಯರಿಗೆ ನಾನು ನಿಷ್ಠನಾಗಿ ನಡೆದ ಕಾರಣ ವೆಂದರೆ ಅವರ ಅಪ್ಪಟ ಪ್ರಾಮಾಣಿಕತೆ. ತಾವು ಮಾಡುತ್ತಿರುವುದು ಪುಸ್ತಕೋದ್ಯಮ, ಅದು ಸರಸ್ವತಿ ಸೇವೆ, ಆದ್ದರಿಂದ ಅದರಲ್ಲಿ ಪ್ರಾಮಾಣಿಕರಾಗಿರಬೇಕೆಂಬುದು ಅವರ ನಂಬಿಕೆಯಲ್ಲ. ಮನುಷ್ಯ ಯಾವುದೇ ದಂಧೆ ಮಾಡಲಿ ಪ್ರಾಮಾಣಿಕತೆ ಬೇಕು. 'ಪುಸ್ತಕ ಪ್ರಕಾಶಕ ಮಾತ್ರ ಪ್ರಾಮಾಣಿಕನಾಗಿರಬೇಕೋ? ಕಿರಾಣಿ ಅಂಗಡಿಯವನು ಇರಬಾರದೋ? ಅಕ್ಕಸಾಲೆ ಮೋಸ ಗಾರನಾಗಿದ್ದರೂ ಅಡ್ಡಿ ಇಲ್ಲವೋ? ಬಸ್ ಕಂಡಕ್ಟರು ಅರ್ಧಕ್ಕೆ ಟಿಕೇಟು ಕೊಟ್ಟು ಇನ್ನರ್ಧವನ್ನು ಕಿಸೆಗೆ ಬಿಟ್ಟರೆ ಆದೀತೊ?' ಎಂಬುದು ಅವರ ಮೂಲ ದೃಷ್ಟಿ. ಸಿಟಿಬಸ್ ಹತ್ತಿ ಆಗಿನ ಹತ್ತು ಪೈಸೆಗೆ ಟಿಕೇಟು ಕೊಡಲು ಕಂಡಕ್ಟರು ನಿಧಾನ ಮಾಡಿ ಮರೆಸಲು ಯತ್ನಿಸಿದರೂ ಬಿಡದೆ ಇವರು ಅವನನ್ನು ಕಾಡಿ ಟಿಕೇಟು ಪಡೆದು ಅವನಿಂದ ಬೈಸಿಕೊಂಡಿರುವುದುಂಟು. 'ನೀವು ಪುಸ್ತಕ ವ್ಯಾಪಾರಕ್ಕೆ ಯಾಕೆ ನಿಂತಿರಿ?' ಎಂದರೆ, ಅದು ಬಿಟ್ಟು ಬೇರೆ ದಂಧೆ ತಿಳಿಯಲಿಲ್ಲ.

ಗೊತ್ತಿರಲಿಲ್ಲ, ಎನ್ನುತ್ತಿದ್ದರೇ ಹೊರತು ಸಾಹಿತ್ಯ ಸರಸ್ವತಿಯ ಸೇವೆಯ ಪುಣ್ಯಕಾರ್ಯಕ್ಕೆ ಇಳಿದೆ ಎಂಬಂತಹ ಕೀರ್ತಿಯ ಮಾತನಾಡುತ್ತಿರಲಿಲ್ಲ. ವ್ಯವಹಾರದಲ್ಲಿ ಜಿಗುಟು. ಒಂದು ಕಾಸಿಗೂ ಲೆಕ್ಕ ತಾಳೆಯಾಗಲೇಬೇಕು. ಆದರೆ ಸುಲಭ ಲಾಭದ ದಾರಿ ಹಿಡಿಯುತ್ತಿರಲಿಲ್ಲ. ಲೇಖಕನಾಗಿ ನನಗೆ ಯಾವ ಹೆಸರೂ ಇಲ್ಲದಾಗ ನನ್ನ ಮೊತ್ತಮೊದಲ ಹಸ್ತಪ್ರತಿ 'ಧರ್ಮಶ್ರೀ'ಯನ್ನು ಪ್ರಕಟಿಸಲು ಅನುಮತಿ ಬೇಡಲು ಅವರೇ ನನ್ನ ಮನೆ ಹುಡುಕಿಕೊಂಡು ಬಂದಿದ್ದರು. ಆ ವಿನಯಕ್ಕೆ ನಾನು ಮಾರುಹೋಗಿದ್ದೆ. ಅನಂತರ ನನಗೆ ಹೆಸರು ಬಂದು ನನ್ನ ಪುಸ್ತಕಗಳಿಗೆ ಎಲ್ಲೆಲ್ಲೂ ಬೇಡಿಕೆ ಏರಿ ಇತರ ಹಲವಾರು ಪ್ರಕಾಶಕರು ಶೇಕಡಾವಾರು ಹೆಚ್ಚು ಗೌರವಧನ ಕೊಡುತ್ತೇವೆ, ಎಂಬ ಪ್ರಲೋಭನೆ ತೋರಿಸಬಂದಾಗ, ಒಂದಾದರೂ ಪುಸ್ತಕ ಕೊಡಿಸಿ ಎಂದು ನನ್ನ ಸ್ನೇಹಿತರಿಂದ ಶಿಫಾರಸು ಹೇಳಿಸಿದಾಗ ನಾನು ಗೋವಿಂದರಾಯರಿಗೇ ನಿಷ್ಠೆಯಿಂದ ನಡೆದುಕೊಂಡದ್ದು ಅವರ ಪ್ರಾಮಾಣಿಕತೆಯಿಂದಾಗಿ. 'ನಾನು ಏನು ತಪ್ಪು ಮಾಡಿದೆ ಅಂತ ನನ್ನನ್ನು ಬಿಟ್ಟು ಬೇರೆಯವರಿಗೆ ಪುಸ್ತಕ ಕೊಟ್ಟಿರಿ?' ಎಂದು ಗೋವಿಂದರಾಯರು ಕೇಳಿದರೆ ಅವರಿಗೆ ಯಾವ ಅಂತರಂಗದ ಧೈರ್ಯ ಇಟ್ಟುಕೊಂಡು ಉತ್ತರ ಹೇಳುವುದು? 'ನಾನು ಯಾವ ತಪ್ಪು ಮಾಡಿದೆ ಅಂತ ನನ್ನನ್ನು ಬಿಟ್ಟು ನೀವು ಬೇರೆಯವಳ ಹಿಂದೆ ಹೋದಿರಿ?' ಎಂದು ಹೆಂಡತಿ ಕೇಳಿದರೆ ಧೈರ್ಯವಾಗಿ ಉತ್ತರ ಕೊಡುವುದು ಅಂತರಂಗ ಶುದ್ಧಿಯುಳ್ಳ ಗಂಡನಿಗೆ ಕಷ್ಟವಾಗುವಂತೆ ನನಗೆ ಗೋವಿಂದರಾಯರೆದುರಿಗೆ ಆಗುವುದು ಬೇಡ ಎಂಬ ನೈತಿಕ ಬಂಧನವು ನನ್ನ ಅವರ ಸ್ಥಾಯೀ ಸಂಬಂಧದ ಮೂಲ ಆಧಾರ. ಅನಂತರ ಬೆಳೆದ ಸೌಹಾರ್ದ ಮೊದಲಾದ ಭಾವನೆಗಳಿಗೆಲ್ಲ ಆಧಾರ ಇದೊಂದೇ. ಚೆನ್ನಾಗಿ ವ್ಯಾಪಾರವಾಗುವ ಪುಸ್ತಕಗಳಿಗೆ ಲೇಖಕರಿಗೊಂದು ಲೆಕ್ಕ, ಕಾಗದ ಮುದ್ರಕ ಮತ್ತು ವಿತರಕರುಗಳಿಗೆ ಇನ್ನೊಂದು ಲೆಕ್ಕ ಇಟ್ಟುಕೊಳ್ಳುವ ಪ್ರಕಾಶಕರಿಗೇನೂ ಕೊರತೆ ಇಲ್ಲ. ಅದು ನನಗೆ ಗೊತ್ತಿತ್ತು. ಗೋವಿಂದ ರಾಯರ ಲೆಕ್ಕವನ್ನು ನಾನು ಆರಂಭದಲ್ಲೇ ಬೇರೆ ಬೇರೆ ಮೂಲಗಳಿಂದ ಅವರಿಗೆ ತಿಳಿಯದಂತೆ ತನಿಖೆ ಮಾಡುತ್ತಿದ್ದೆ; ಮಾಡಿಸುತ್ತಿದ್ದೆ.

೧೯೭೨-೭೩ರಲ್ಲಿರಬಹುದು. ನನಗೆ ಒಂದು ಸಾವಿರ ರೂಪಾಯಿ ಕೊಟ್ಟಿದ್ದೇನೆಂಬ ನೆನಪು ಅವರದು. 'ಈ ವರ್ಷದ ಶುರುವಿನಲ್ಲೇ ನಾನು ನಿಮಗೆ ಒಂದು ಸಾವಿರ ಕೊಟ್ಟಿದ್ದೆ ಅಂತ ಅಸ್ಪಷ್ಟ ಜ್ಞಾಪಕ. ಆದರೆ ಲೆಕ್ಕದ ಪುಸ್ತಕದಲ್ಲಿ ನಮೂದಾಗಿಲ್ಲ. ಕೊಟ್ಟ, ತೆಗೆದುಕೊಂಡ ತತ್‌ಕ್ಷಣ ಬರೆಯುವ ಪದ್ಧತಿಯವನು ನಾನು. ನಿಮ್ಮ ಲೆಕ್ಕದಲ್ಲೇನಾದರೂ ದಾಖಲಾಗಿದೆಯೇ, ನೋಡಿ' ಎಂದರು. ಅಷ್ಟರಲ್ಲೇ ನನ್ನ ಲೆಕ್ಕವನ್ನೆಲ್ಲ ನಾನು ಗೋವಿಂದರಾಯರ ನಂಬಿಕೆಗೆ ಬಿಟ್ಟಿದ್ದೆ. ಮಾರ್ಚ್ ೩೧ರ ಅನಂತರ ಒಂದು ದಿನ ನನ್ನ ಖಿರ್ದಿ ಪುಸ್ತಕದಲ್ಲಿ ಹಿಂದಿನ ವರ್ಷದ ಲೆಕ್ಕದ ವಿವರಗಳನ್ನೆಲ್ಲ ಅವರೇ ಬರೆದುಕೊಡುತ್ತಿದ್ದರು. 'ನನ್ನ ಹಾಳೆಯಲ್ಲಿ ಏನೂ ಇಲ್ಲ' ಎಂದು ಅವರಿಗೇ ತೋರಿಸಿದೆ. 'ಹಾಗಾದರೆ ನನ್ನ ಜ್ಞಾಪಕವೇ ತಪ್ಪಿದೆ. ವಯಸ್ಸಾಯಿತು' ಎಂದು ಅವರು ನಕ್ಕರು. 'ನಾನೂ ನೆನಸಿಕೊಳ್ಳುತ್ತೀನಿ ತಾಳಿ' ಎಂದು ಸುಮ್ಮನಾದೆ. ಅನಂತರ ನಾನು ನನ್ನ ಮಿದುಳನ್ನು ಹಲವು ಬಾರಿ ಕೆರೆದುಕೊಂಡೆ. ಏನೂ ಹುಟ್ಟಲಿಲ್ಲ. ಇದನ್ನು ತೀರ್ಮಾನಿಸುವುದು ಹೇಗೆ? ಎಂಬ ಉಭಯಸಂಕಟ ನನಗೆ ಉಂಟಾಯಿತು. ಮುಂದಿನ

ಸಲ ಅವರು ಮೈಸೂರಿಗೆ ಬಂದಾಗ, 'ನಿಮಗೆ ಹಾಗೆ ನೆನಪು ಸುಳಿಯಬೇಕಾದರೆ ನೀವು ಕೊಟ್ಟೇ ಇದ್ದೀರಿ. ನಾನು ಸಂದಾಯ ಬರೆಯುತ್ತೇನೆ' ಎಂದೆ. 'ಖಚಿತ ದಾಖಲೆಯಿಲ್ಲದೆ ಸಂದಾಯ ಬರೆದರೆ ಅನ್ಯಾಯವಾಗುತ್ತೆ. ಅಸ್ಪಷ್ಟ ನೆನಪು ಮೋಸಮಾಡಬಹುದು. ಬೇಡಿ, ಬೇಡಿ' ಅವರು ಹಟ ಹಿಡಿದರು. 'ಅಕಸ್ಮಾತ್ ನಿಮ್ಮ ನೆನಪು ನಿಜವನ್ನೇ ಸೂಚಿಸಿದ್ದರೆ ನಾನು ನಿಮಗೆ ಮೋಸ ಮಾಡಿದ ಹಾಗೆ ಆಗುಲ್ಲವೆ?' ನಾನು ಕೇಳಿದೆ. ಒಂದು ಸಾವಿರ ರೂಪಾಯಿ ನಮ್ಮಿಬ್ಬರಲ್ಲಿ ಯಾರಿಗೂ ಮುಖ್ಯ ಅಂಶವಾಗಿರಲಿಲ್ಲ. ನ್ಯಾಯವನ್ನು ಹುಡುಕುವುದಷ್ಟೇ ಇಬ್ಬರಿಗೂ ಬೇಕಾಗಿದ್ದುದು. 'ಹಾಗಾದರೆ ಹ್ಯಾಗೆ ಪತ್ತೆ ಮಾಡೂದು?' ಅವರು ಕೇಳಿದರು. 'ಸುಮ್ಮನೆ ತಲೆ ಕೆಡಿಸಿಕೊಳ್ಳೂದು ಬೇಡ. ಐದುನೂರು ಸಂದಾಯವಾಗಿದೆ ಅಂತ ನಾನು ಬರೆದುಕೊಂಡು ಬಿಡುತ್ತೇನೆ. ಯಾವ ಕಡೆಯಿಂದ ಅನ್ಯಾಯವಾಗಿದ್ದರೂ ಅದನ್ನು ನಾವಿಬ್ಬರೂ ಹಂಚಿಕೊಂಡ ಹಾಗಾಗುತ್ತೆ. ನೀವು ಒಪ್ಪಿಕೊಳ್ಳಿ' ನಾನೆಂದೆ. ತುಸುಹೊತ್ತು ಯೋಚಿಸಿದ ಅನಂತರ ಅವರು 'ಬೇರೆ ದಾರಿ ಕಾಣುವುದಿಲ್ಲ' ಎಂದು ಒಪ್ಪಿಕೊಂಡರು.

ಅವರಿಗೆ ತೀರ ಕೈಲಾಗದಂತಾದಾಗ ಮಕ್ಕಳಿಗೆ ಅಂಗಡಿಯನ್ನು ವಹಿಸಿ ತಾವು ಮನೆಯಲ್ಲಿರ ತೊಡಗಿದರು. ಅಂಗಡಿಯ ಲೆಕ್ಕವನ್ನು ಅವತ್ತವತ್ತಿನದು ಅವತ್ತವತ್ತೇ ಬರೆದು ಮನೆಗೆ ಬರ ಬೇಕೆಂಬುದು ಅವರ ನಿಯಮ. ಮಕ್ಕಳಿಗೆ ಇದು ತೀರ ಜಿಗುಟು ನಿಯಮವೆನಿಸುತ್ತಿತ್ತು. ಇದರಿಂದ ಹಲವು ಸಲ ತಂದೆಯು ರೇಗಿ ಮಕ್ಕಳು ಮುನಿಸಿಕೊಳ್ಳುತ್ತಿದ್ದುದೂ ಉಂಟು. ಈಗ ನಾಲ್ಕು ವರ್ಷದ ಹಿಂದೆ ಗೋವಿಂದರಾಯರು ಕಾಯಿಲೆ ಮಲಗಿದ್ದರು. ಒಂದು ತಿಂಗಳಿನ ಅನಂತರ ಎದ್ದು ಕೂರುವಂತಾದ ಮೇಲೆ ಅಂಗಡಿಯ ಹಿಂದಿನ ವರ್ಷಗಳ ಲೆಕ್ಕದ ಖಿರ್ದಿಗಳನ್ನು ತರಿಸಿ ನೋಡತೊಡಗಿದರು. ಎರಡು ಮೂರು ತಿಂಗಳು ಹೀಗೆ ಕಣ್ಣಲ್ಲಿ ಕಣ್ಣಿಟ್ಟು ನೋಡಿದ ಅನಂತರ ಕೆಲವು ತಪ್ಪುಗಳು ಕಣ್ಣಿಗೆಬಿದ್ದವು. ಅವನ್ನೇ ಹಿಡಿದು ಶೋಧಿಸಿದರು. 'ನಿಮ್ಮನ್ನು ಬಂದು ನೋಡಬೇಕಾಗಿದೆ. ಮೈಸೂರಿಗೆ ಪ್ರಯಾಣ ಮಾಡುವ ಚೈತನ್ಯವಿಲ್ಲ. ನೀವೇ ಒಂದು ದಿನ ಬೆಂಗಳೂರಿಗೆ ಬನ್ನಿ' ಎಂದು ನನಗೊಂದು ಕಾಗದ ಬರೆದರು. ನಾನು ಹೋದೆ.

'ನೋಡಿ, ನಿಮ್ಮ ಆಯಾ ವರ್ಷದ ಲೆಕ್ಕವನ್ನು ಸರಿಯಾಗಿ ನೋಡಿ ಅಂತ ನಾನು ನಿಮಗೆ ಹೇಳ್ತಿರ್ತೀನಿ, ನೀವು ಆ ಕಡೆ ಗಮನ ಕೊಡ್ತಿಲ್ಲ. ಮಕ್ಕಳು ಅಪ್ರಾಮಾಣಿಕರಲ್ಲ. ಆದರೆ ಕ್ರಮವಾಗಿ ಲೆಕ್ಕ ಇಡುವ ಶಿಸ್ತಿಲ್ಲ. ಈ ಐದು ವರ್ಷದ ಹಿಂದೆ ಒಂದು ಪುಸ್ತಕದ ಪುನರ್ಮುದ್ರಣದ ಜಮಾ ಹಿಡಿಯೂದ ಮರೆತುಬಿಟ್ಟಿದ್ದಾರೆ. ನಾವು ನಿಮಗೆ ೧೮,೩೦೦ ರೂಪಾಯಿ ಕೊಡಬೇಕಿತ್ತು. ಅದು ಮರೆತರು. ನೀವು ಗಮನಿಸಲಿಲ್ಲ. ಅವರಿಗಿಂತ ಹಿರಿಯರಾದ ನೀವು ಎಚ್ಚರ ವಹಿಸದಿದ್ದರೆ ಹೇಗೆ?' ಎಂದು ಕೋಪದ ಧ್ವನಿಯಲ್ಲೇ ಕೇಳಿದರು. ಆಗ ಅವರ ಆರ್ಥಿಕ ಸ್ಥಿತಿ ಅಷ್ಟೇನೂ ಉತ್ತಮವಾಗಿರಲಿಲ್ಲ. ಆಗಲೇ ಆ ಹಣವನ್ನು ಕೊಡಲು ಸಾಧ್ಯವೂ ಇರಲಿಲ್ಲ. ಮುಂದಿನ ವರ್ಷ ಕೊಟ್ಟರು. ಆದರೆ ಲೆಕ್ಕಕ್ಕೆ ಬರೆಸಿ ಸರಿ ಪಡಿಸುವ ತನಕ ಅವರ ಚಡಪಡಿಕೆ ನಿಲ್ಲಲಿಲ್ಲ. ಅವರು ಪತ್ತೆ ಮಾಡದಿದ್ದರೆ ಯಾರಿಗೂ ಗೊತ್ತಾಗುತ್ತಿರಲಿಲ್ಲ.*

---

*ಶ್ರೀ. ಶಾ.ಮಂ. ಕೃಷ್ಣರಾಯರು ತಮ್ಮ ಬರಹದಲ್ಲಿ ಪ್ರಸ್ತಾಪ ಮಾಡಿದ್ದುದು ಇದೇ ಪ್ರಸಂಗವನ್ನು – ಸಂ.

ಒಮ್ಮೆ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಅವರು ಸುಮಾರು ೧೫ ಸಾವಿರ ರೂಪಾಯಿಯ ಪುಸ್ತಕಗಳನ್ನು ಸರಬರಾಜು ಮಾಡಿದರು. ಎಲ್ಲವೂ ಅವರ ಪ್ರಕಾಶನದ್ದಲ್ಲ. ಬೇರೆ ಬೇರೆ ಪ್ರಕಾಶಕರ, ಬೇರೆ ಬೇರೆ ಕಡೆಯಿಂದ ಶ್ರಮವಹಿಸಿ ತರಿಸಿಕೊಟ್ಟದ್ದು. ಬಿಲ್ ಕಳಿಸಿ ಮೂರು ತಿಂಗಳಾದರೂ ಅಧಿಕಾರಿಗಳು ಕಳಿಸಲಿಲ್ಲ. ಇವರು ಏಳೆಂಟುಸಲ ಅಲೆದರು. ಕೊನೆಗೆ ಜೋರು ಮಾಡಿ ಕೇಳಿದ್ದಕ್ಕೆ, 'ಬರೀ ಅಲೆದರೆ ದುಡ್ಡು ಬಂದುಬಿಡುತ್ತೋ? ನಮ್ಮನ್ನು ನೋಡಿಕೊಳ್ಳ ಬೇಡವ್ವೋ?' ಎಂದು ಮಾರ್ಮಿಕವಾಗಿ ಉತ್ತರವಿತ್ತರು. ಒಂದೇ ಒಂದು ಕಾಸನ್ನು ಲಂಚ ಕೊಡುವುದೂ ಗೋವಿಂದರಾಯರಿಗೆ ಸಾಧ್ಯವಾಗದ ಮಾತು. 'ಸ್ವಾಮಿ, ನಮ್ಮ ಅಂಗಡಿಗೆ ನೀವು ಬಂದರೆ ಒಂದು ಕಪ್ ಕಾಫಿ ತರಿಸುತೀನಿ. ನಿಮ್ಮ ಆಫೀಸಿಗೆ ನಾನು ಬಂದಾಗ ನೀವು ಏನೂ ತರಿಸಬೇಡಿ. ಯಾಕೆಂದರೆ ನೀವು ಸರಕಾರಿ ನೌಕರರು. ಇಷ್ಟು ಬಿಟ್ಟು ಯಾರನ್ನು ಯಾರೂ ನೋಡಿಕೊಳ್ಳೂ ಪದ್ಧತಿಯೂ ನನ್ನ ಹತ್ರ ನಡೆಯಲ್ಲ,' ಎಂದರು. ಅಧಿಕಾರಿಗಳು ಇನ್ನೂ ತಡಮಾಡಿದರು. ಇವರ ಹದಿನೈದು ಸಾವಿರ ರೂಪಾಯಿ ಎರಡು ವರ್ಷವಾದರೂ ಬರದೆ ಅದರ ಬಡ್ಡಿ ಹೋಗುತ್ತಿತ್ತು. ಆಗ ಉಪಕುಲಪತಿಗಳಾದ ಡಾ॥ ಎಚ್. ನರಸಿಂಹಯ್ಯ ಅವರನ್ನೂ ಇವರು ಎರಡು ಸಲ ನೋಡಿದರು. 'ಹೀಗುಂಟೆ? ನಾನು ನೋಡುತ್ತೇನೆ' ಎಂದು ನರಸಿಂಹಯ್ಯನವರು ಚುಚ್ಚುದಿಂದ ನುಡಿದರೇ ಹೊರತು ಭ್ರಷ್ಟ ಅಧಿಕಾರಿಗಳನ್ನು ನಿಯಂತ್ರಿಸುವುದು ಅವರಿಂದಾಗಲಿಲ್ಲ. ಈ ಹಂತದಲ್ಲಿ ಗೋವಿಂದರಾಯರು ವಿಷಯವನ್ನು ನನ್ನ ಗಮನಕ್ಕೆ ತಂದರು. ನಾನು ವೃತ್ತಪತ್ರಿಕಾ ಮಿತ್ರರಾದ ಗರುಡನಗಿರಿ ನಾಗರಾಜರಿಗೆ ಹೇಳಿದೆ. ಅವರು ನರಸಿಂಹಯ್ಯ ನವರಿಗೆ ಫೋನ್ ಮಾಡಿ, 'ಸಾಹಿತ್ಯ ಭಂಡಾರದ ಗೋವಿಂದರಾಯರು ಲಂಚ ಕೊಡಲಿಲ್ಲ ಅಂತ ಅವರ ಬಿಲ್ ಪಾಸ್ ಮಾಡಿ ಹಣ ಕೊಡದೆ ಎರಡು ವರ್ಷದಿಂದ ನಿಮ್ಮ ಪುಸ್ತಕ ಭಂಡಾರದವರು ಸತಾಯಿಸುತ್ತಿದ್ದಾರೆ. ಇದನ್ನು ಹೊರಹಾಕಬೇಕು ಅಂತ ಅವರು ಒಂದು ಪತ್ರಿಕಾಗೋಷ್ಠಿ ಕರೆಯುವ ಸನ್ನಾಹದಲ್ಲಿದ್ದಾರೆ. ಅವರು ನಿಮ್ಮನ್ನೂ ಎರಡು ಸಲ ನೋಡಿದ್ದ ರಂತೆ. ಪತ್ರಿಕಾಗೋಷ್ಠಿ ಕರೆದರೆ ನಿಮ್ಮ ಗೌರವ ಉಳಿಯುವುದಿಲ್ಲ' ಎಂದರು.

'ಅಯ್ಯಯ್ಯೋ, ಅದೆಲ್ಲ ಬೇಡಿ ಅಂತ ಹೇಳಿ ಅಪ್ಪಾ, ನಾನು ವಿಚಾರಿಸುತ್ತೀನಿ. ಎರಡು ದಿನದಲ್ಲಿ ಚೆಕ್ ಕಳಿಸುತ್ತೀನಿ' ಎಂದು ಹೌಹಾರಿದ ಉಪಕುಲಪತಿಗಳು, ಇವರು ಪತ್ರಿಕಾಗೋಷ್ಠಿ ಕರೆಯುವ ವಿಷಯವನ್ನೇ ಹೇಳಿ ಸಂಬಂಧಿಸಿದವರನ್ನು ಅಂಜಿಸಿ ಒಂದು ವಾರದಲ್ಲಿ ಚೆಕ್ ಕಳಿಸುವಂತೆ ಮಾಡಿದರು.

ಸರಕಾರ ಕನ್ನಡ ಪುಸ್ತಕಗಳನ್ನು ಸಾರಾಸಗಟು ಕೊಂಡು ಕೆಲವು ಪುಸ್ತಕ ಭಂಡಾರಗಳಿಗೆ ಹಂಚುವ ಪದ್ಧತಿ ಕೆಲವು ವರ್ಷ ಇತ್ತು. ಯಾರಿಗೂ ಬಿಡಿಗಾಸೂ ಲಂಚ ಕೊಡದ ಗೋವಿಂದ ರಾಯರ ಪ್ರಕಾಶನದ ಒಂದು ಪುಸ್ತಕವೂ ಈ ಯೋಜನೆಯಲ್ಲಿ ಖರೀದಿಯಾಗಲಿಲ್ಲ. ನನ್ನ ಒಂದು ಪುಸ್ತಕವೂ ಅದರಲ್ಲಿ ಸೇರಲಿಲ್ಲ. ನನ್ನ ಪುಸ್ತಕದ ವ್ಯಾಪಾರವೆಲ್ಲ ಹಣಕೊಟ್ಟು ಕೊಂಡು ಓದುವವರನ್ನು ಮಾತ್ರ ಅವಲಂಬಿಸಿದೆ ಎಂದು ನನಗೆ ಇದರಿಂದ ಸಂತೋಷವೇ ಆಯಿತು.

'ಪರ್ವ' ಬರೆಯಲು ನನಗೆ ಒಟ್ಟು ಹದಿನಾಲ್ಕು ತಿಂಗಳು ಹಿಡಿಯಿತು. ಕೆಲವು ತಿಂಗಳು ಸಂಬಳವಿತ್ತು. ಉಳಿದಂತೆ ಸಂಬಳವಿಲ್ಲದ ರಜೆ ಪಡೆದು ಬರವಣಿಗೆಯಲ್ಲಿ ಮಗ್ನನಾಗಿದ್ದೆ.

ನನ್ನ ಆಲೋಚನೆಯನ್ನು ಗೋವಿಂದರಾಯರಿಗೆ ತಿಳಿಸಿದೆ. 'ಒಳ್ಳೆಯ ಕೆಲಸ, ನೀವು ಕೂತು ಬರೆಯಿರಿ, ಸಂಸಾರದ ಚಿಂತೆ ಇಟ್ಟುಕೋಬೇಡಿ. ಅದು ನನಗಿರಲಿ' ಎಂದರು. ಪ್ರತಿ ತಿಂಗಳು ಮೊದಲ ವಾರದಲ್ಲಿ ನನಗೆ ಎರಡು ಸಾವಿರ ರೂಪಾಯಿಗಳನ್ನು ತಲುಪಿಸುತ್ತಿದ್ದರು. ೧೯೭೩ರಲ್ಲಿ ಅಷ್ಟು ಹಣ ಸಾಕಾಗುತ್ತಿತ್ತು. ಬರವಣಿಗೆ ಮತ್ತು ಮಗ್ನತೆಯ ಬಳಲಿಕೆಯಿಂದ ನನಗೆ ತಲೆಸುತ್ತು ಬರತೊಡಗಿತು. ವಿಶ್ರಾಂತಿ ಬೇಕು. ಕೆಲವು ದಿನ ಊರು ಬಿಟ್ಟು ಹೋಗಿ ಎಂದು ವೈದ್ಯರು ಸೂಚಿಸಿದರು. ಒಂದಿಷ್ಟು ಸಂಗೀತವನ್ನು ಕೇಳಿದರೆ ವಿಶ್ರಾಂತಿಯಾಗುತ್ತದೆಂದು ಹುಬ್ಬಳ್ಳಿಗೆ ಹೋದೆ. ಅದು ತಿಳಿದ ಗೋವಿಂದರಾಯರು ಬೆಂಗಳೂರಿನಿಂದ ಅಲ್ಲಿಗೆ ಬಂದರು. ಅಷ್ಟರಲ್ಲಿ ಅವರು ಹುಬ್ಬಳ್ಳಿಯ ಅಂಗಡಿಯನ್ನು ತಮ್ಮನಿಗೆ ವಹಿಸಿ, ತಾವು ಬೆಂಗಳೂರಿನಲ್ಲಿ ಹೊಸ ಅಂಗಡಿ ತೆರೆದಿದ್ದರು. ನನ್ನ ಆರೋಗ್ಯದ ಬಗೆಗೆ ಅವರು ವಹಿಸಿದ ಕಳಕಳಿ, ನನ್ನನ್ನು ಮನೋ ರೋಗ ವೈದ್ಯರಲ್ಲಿಗೆ ಕರೆದೊಯ್ದದ್ದು ಎಲ್ಲವನ್ನೂ 'ಪರ್ವ ಬರೆದದ್ದು' ಲೇಖನದಲ್ಲಿ ವಿವರಿಸಿದ್ದೇನೆ. ಸಂಬಳವಿಲ್ಲದ ರಜೆ ಹಾಕಿ ಎಂಟು ತಿಂಗಳು ಅಮೆರಿಕೆ ಪ್ರವಾಸ ಹೋದಾಗಲೂ ಅಷ್ಟೆ. 'ಸಂಚಾರ ಮಾಡದಿದ್ದರೆ ಸಾಹಿತಿಗೆ ಹೊಸ ಅನುಭವ ಆಗೂದು ಹೇಗೆ? ನೀವು ಹೋಗಿ. ಪ್ರತಿ ತಿಂಗಳೂ ನಾನು ನಿಮ್ಮ ಮನೆಗೆ ಹಣ ಕಳಿಸುತೀನಿ. ಆಗಾಗ್ಗ ಮೈಸೂರಿಗೆ ಹೋಗಿ ಕಷ್ಟಸುಖ ವಿಚಾರಿಸುತೀನಿ. ಅವರಿಗೆ ಏನು ತೊಂದರೆ ಇದ್ದರೂ ನನಗೆ ಹೇಳಲಿ. ನಿಮಗೆ ಚಿಂತೆ ಬೇಡ' ಎಂದರು. ಅದರಂತೆಯೇ ನಡೆದರು.

ತಮ್ಮ ಪ್ರಕಟಣೆಯ ಪುಸ್ತಕ ಅದೆಷ್ಟೇ ಹಳೆಯದಾಗಿರಲಿ, ಗೋವಿಂದರಾಯರಿಗೆ ಬಲು ಮಮತೆ. ಅದು ಕೇವಲ ವ್ಯವಹಾರದ ಮಮತೆಯಲ್ಲ. ವೈದ್ಯ ಗೋಪಾಲಕೃಷ್ಣರಾಯರ ಪುಸ್ತಕ ಗಳು, ಹರಿದಾಸರಾಯರ ಬಾಳಿನ ಗಿಡ, ಇಂಥ ಪುಸ್ತಕಗಳನ್ನು ಸಾಹಿತ್ಯ ಭಂಡಾರವು ಈಗಲೂ ಶ್ರದ್ಧೆಯಿಂದ ಪುನರ್ಮುದ್ರಿಸುತ್ತಿದೆ. 'ಬೇಡಿಕೆ ಕಡಿಮೆಯಾದರೂ ಪುಸ್ತಕವು ಅಂಗಡಿಗಳಲ್ಲಿ ಸಿಗುವುದಿಲ್ಲ ಎನ್ನಿಸಬಾರದು. ಒಬ್ಬರಲ್ಲ ಒಬ್ಬರು ಅದನ್ನು ಜ್ಞಾಪಿಸಿಕೊಳ್ಳುತ್ತಾರೆ. ಹುಡುಕುತ್ತಾರೆ. ಒದಗಿಸಬೇಕಾದುದು ಪ್ರಕಾಶಕರ ಕರ್ತವ್ಯ' ಎಂಬುದು ಅವರ ವೃತ್ತಿ ನೀತಿ. ನಮ್ಮ ಸಂಸ್ಥೆಯ ಪ್ರಕಟಣೆಯು ನೂರನ್ನು ಮುಟ್ಟಿತು. ಐನೂರನ್ನು ಮುಟ್ಟಿತು. ಖ್ಯಾತನಾಮರ ಪುಸ್ತಕಗಳನ್ನೆಲ್ಲ ಪ್ರಕಟಿಸಿದ ಖ್ಯಾತಿ ನಮ್ಮದು ಎಂದು ಕೆಲವು ಪ್ರಕಾಶನ ಸಂಸ್ಥೆಗಳು ಹೆಮ್ಮೆ ಪಟ್ಟುಕೊಳ್ಳಬಹುದು. ಆದರೆ ತಾವು ಪ್ರಕಟಿಸಿದ ಪುಸ್ತಕಗಳ ಮರುಮುದ್ರಣಗಳನ್ನು ಅನೇಕ ಪ್ರಕಾಶಕರು ಮಾಡುವುದಿಲ್ಲ. ಮೊದಲ ಪ್ರಕಟಣೆಗೆ ಮಾರುಕಟ್ಟೆ ಇದ್ದೇ ಇರುತ್ತದೆ. ಅದು ಕಡಿಮೆಯಾದಾಗಲೂ ಮುದ್ರಿಸಿ ಒದಗಿಸಲು ನೈತಿಕನಿಷ್ಠೆ ಬೇಕು. ಗೋವಿಂದರಾಯರಿಗೆ ಈ ನಿಷ್ಠೆ ಇತ್ತು. ನನ್ನ ಪುಸ್ತಕಗಳಲ್ಲಿ ಯಾವುವೂ ಸಿಕ್ಕುವುದಿಲ್ಲ ಎನ್ನಲು ಅವಕಾಶ ಕೊಡದೆ ಮರುಮುದ್ರಣ ಮಾಡುತ್ತಲೇ ಇದ್ದರು. ಲೇಖಕನಿಗೆ ನಿರಂತರವಾಗಿ ನಾಲ್ಕು ಕಾಸು ಬರುವುದು ಮರುಮುದ್ರಣಗಳಿಂದಲೇ. ಯಾರೂ ಒಂದೇ ಸಮನೆ ಹೊಸತನ್ನು ಬರೆಯಲು ಸಾಧ್ಯವಿಲ್ಲ. ಬರೆಯಲೂಬಾರದು.

'ದಾಟು' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಬಂದಾಗ ಎಲ್ಲರಿಗಿಂತ ಹೆಚ್ಚು ಸಂತೋಷಪಟ್ಟವರು ಅವರು. ಮನೆಯಲ್ಲಿ ಹಬ್ಬ ಆಚರಿಸಿದರು. ಅದರ ನೆನಪಿನಲ್ಲಿ ಕಾದಂಬರಿಗಳನ್ನು ಕುರಿತ ವಿಮರ್ಶಾ ಲೇಖನಗಳನ್ನು ಪ್ರೋತ್ಸಾಹಿಸಲು ವಿನಿಯೋಗಿಸುವಂತೆ

ಸಾಹಿತ್ಯ ಪರಿಷತ್ತಿಗೆ ಒಂದು ಸಾವಿರ ರೂಪಾಯಿ ದತ್ತಿಕೊಟ್ಟರು.

ಅವರು ನನ್ನನ್ನು ಅದೆಷ್ಟೇ ಗೌರವದಿಂದ ಕಂಡು ನನ್ನ ಮಾತಿಗೆ ಅದೆಷ್ಟೇ ಮನ್ನಣೆ ಕೊಟ್ಟರೂ ನಾನು ಅವರ ವ್ಯವಹಾರದಲ್ಲಿ ಪ್ರವೇಶಿಸಿಲ್ಲ. ಪ್ರಕಾಶನದ ಕಷ್ಟ ಸುಖ ಅವರದು. ಹೀಗೆಯೇ ಕೊಡಬೇಕು. ಹೀಗೆಯೇ ಬಿಡಬೇಕು ಎಂಬ ಪ್ರತಿಷ್ಠೆಯನ್ನು ಎಂದೂ ಹೇರಲು ಹೋಗಿಲ್ಲ. ಎಷ್ಟೋ ಜನ ನನ್ನ ಪುಸ್ತಕಗಳನ್ನು ನನ್ನಲ್ಲಿ ಖರೀದಿಗೆ ವಿಚಾರಿಸುತ್ತಾರೆ. ಕೊಳ್ಳುವುದೇ ನಿದ್ದರೂ ಮೈಸೂರಿನಲ್ಲಿರುವ ಪುಸ್ತಕದ ಅಂಗಡಿಗಳಲ್ಲಿ ವಿಚಾರಿಸಿ ಎಂದೇ ನಿರ್ದೇಶಿಸುತ್ತೇನೆ. ಇಲ್ಲಿ ಸಿಗಲಿಲ್ಲವೆಂದರೆ ಬೆಂಗಳೂರಿನ ಸಾಹಿತ್ಯಭಂಡಾರದಲ್ಲೇ ಕೇಳುವಂತೆ ಹೇಳುತ್ತೇನೆ. ಕೆಲವು ಸಮಯ ತೀರ ತುರ್ತು ಸಂದರ್ಭದಲ್ಲಿ ನನ್ನಲ್ಲಿರುವ ಗೌರವ ಪ್ರತಿಗಳನ್ನು ಅವರಿಗೆ ಕೊಟ್ಟು ಹಣ ಪಡೆದಿರುವುದುಂಟು. ಅಂಥ ಸಂದರ್ಭದಲ್ಲಿ ನಾನು ಸಾಹಿತ್ಯ ಭಂಡಾರಕ್ಕೆ, ಇಂಥ ವಿಳಾಸದ, ಇಂಥವರಿಂದ ನಾನು ಇಷ್ಟು ಹಣ ಪಡೆದು ಇಂಥಿಂಥ ಪುಸ್ತಕಗಳನ್ನು ಕೊಟ್ಟಿದ್ದೇನೆ. ಹಣವನ್ನು ನನ್ನ ಲೆಕ್ಕಕ್ಕೆ ಬರೆದುಕೊಂಡು ಅವರಿಗೆ ರಶೀತಿ ಕಳಿಸಿ ಎಂದು ಒಂದು ಕಾರ್ಡು ಬರೆದುಬಿಡುತ್ತೇನೆ. ಅವರಿಗೆ ರಶೀತಿ ಹೋಗುತ್ತದೆ. ವ್ಯವಹಾರದಲ್ಲಿ, ಸ್ನೇಹದಲ್ಲಿ, ವೃತ್ತಿಯಲ್ಲಿ, ಪ್ರಾಮಾಣಿಕತೆಯಿದ್ದರೆ ಜೀವನ ಎಷ್ಟು ಸುಲಭವಾಗಿರುತ್ತದೆ! ಎಷ್ಟು ಸುಂದರವಾಗಿರುತ್ತದೆ!

ಗೋವಿಂದರಾಯರು ಯಾವತ್ತೂ ಅನುಕೂಲಸ್ಥರೆನ್ನುವ ಮಟ್ಟ ಮುಟ್ಟಲಿಲ್ಲ. ಆದರೆ ಅವರು ಯಾವತ್ತೂ ಒಬ್ಬರಲ್ಲ ಒಬ್ಬ ಬಂಧುಗಳಿಗೆ, ಸ್ನೇಹಿತರಿಗೆ, ಕಷ್ಟದಲ್ಲಿರುವವರಿಗೆ ಸಹಾಯ ಮಾಡದೆ ಬಿಟ್ಟಿಲ್ಲ. ಅವರ ಬಳಗಕ್ಕೆಲ್ಲ ಅವರೊಂದು ಆಧಾರಸ್ತಂಭ. ಆರ್ಥಿಕವಾಗಿಯೋ, ನೈತಿಕವಾಗಿಯೋ, ಭಾವನಾತ್ಮಕವಾಗಿಯೋ, ಯಾರಿಗೆ ಕಷ್ಟಬರಲಿ, ನಾನಿದ್ದೀನಿ ಹೆದರುವುದೇಕೆ? ಎಂದು ಹೆಗಲು ಕೊಡುವುದು ಅವರ ಸ್ವಭಾವ. ಕಳೆದ ಮೂವತ್ತು ವರ್ಷಗಳಿಂದ ನಾನು ಇಂಥವನ್ನು ಪ್ರತ್ಯಕ್ಷ ಕಂಡು ಬಲ್ಲೆ. ಅದರ ಹಿಂದಿನದನ್ನು ಬೇರೆಯವರಿಂದ ಕೇಳಿ ಬಲ್ಲೆ. ಸಹಧರ್ಮಿಣಿ ಸತ್ಯವತಿಯವರನ್ನು ಗೋವಿಂದರಾಯರ ಸಹಧರ್ಮಿಣಿ ಎಂದು ಮಾತ್ರವಲ್ಲ ಅವರ ವ್ಯಕ್ತಿತ್ವದಿಂದಲೇ ನಾನು ತುಂಬ 'ಗೌರವಿಸುತ್ತೇನೆ. ಎಂಥ ಸಂದರ್ಭದಲ್ಲೂ ತಾಳ್ಮೆ ತಪ್ಪದೆ ಸದಾ ಹಸನ್ಮುಖಿಯಾಗಿ ನಿಷ್ಕಾಮಕರ್ಮಿ ಎಂಬಂತೆ ಎಲ್ಲವನ್ನೂ ನಿಭಾಯಿಸಿಕೊಂಡು ಹೋಗುವ ಅಂತಹ ಹೆಂಗಸರನ್ನು ನನ್ನ ಜೀವನದಲ್ಲಿ ನನ್ನ ತಾಯಿಯನ್ನು ಬಿಟ್ಟರೆ ನಾನು ನೋಡಿರುವುದು ಒಬ್ಬಿಬ್ಬರನ್ನು ಮಾತ್ರ. ಹಗಲೆಲ್ಲ ದುಡಿದು ರಾತ್ರಿ ಒಂಬತ್ತೂವರೆಯ ಅನಂತರ ಅಂಗಡಿಯಿಂದ ಮನೆಗೆ ಬರುವ ಗಂಡ ಮಕ್ಕಳಿಗೆ ಊಟಕ್ಕೆ ಬಡಿಸಿ ತಾವೂ ಉಂಡು ಹನ್ನೆರಡು ಗಂಟೆಯ ವೇಳೆಗೆ ಮಲಗಿರುತ್ತಾರೆ. ದಾವಣಗೆರೆಯಿಂದಲೋ, ಹುಬ್ಬಳ್ಳಿಯಿಂದಲೋ, ಬಿಜಾಪುರ ದಿಂದಲೋ, ಮಂಗಳೂರಿನಿಂದಲೋ, ಬಸ್ ತಡವಾಗಿ ಯಾರೋ ಇಬ್ಬರು ಮೂರು ಬಂಧುಗಳು ಬಂದು ಬಾಗಿಲು ತಟ್ಟುತ್ತಾರೆ. ಉಳಿದವರಿಗೆ ನಿದ್ರೆ ಬಂದಿರುತ್ತದೆ. ಎದ್ದು ಬಾಗಿಲು ತೆಗೆಯುವ ಸತ್ಯವತಿಯವರ ಮುಖದಲ್ಲಿ ಸ್ವಲ್ಪವಾದರೂ ಸಿಡುಕಿರುವುದಿಲ್ಲ. ಅದೇ ಹಸನ್ಮುಖಿ. ಅದೇ ಸ್ವಾಗತ, ಅಕ್ಕರೆ. 'ಬಾ, ಬನ್ನಿ. ಅಯ್ಯೋ ಆ ಬಸ್ಸು ಯಾವತ್ತೂ ಹಾಗೇನೇ. ಇಲ್ಲೇ ಕೂತುಕೊ ಬನ್ನಿ' ಎಂದು ಅಡುಗೆ ಮನೆಯಲ್ಲೇ ಕೂರಿಸಿ ಬೇಗ ಒಂದಿಷ್ಟು ಅನ್ನ ಮಾಡಿ ಉಳಿದ ಸಾರಿನಲ್ಲೋ ಮಜ್ಜಿಗೆ ಉಪ್ಪಿನಕಾಯಿಯಲ್ಲೋ ಬಡಿಸಿ ಅವರಿಗೆ ಹಾಸಿಗೆಗೆ ಅಣಿಮಾಡಿ

ಅದುವರೆಗೂ ಬಂದವರ ಊರಿನ ಎಲ್ಲರ ಯೋಗಕ್ಷೇಮ ವಿಚಾರಿಸಿ ಎರಡೂವರೆ ಗಂಟೆಯ ಹೊತ್ತಿಗೆ ಮಲಗಿ ಮತ್ತೆ ಐದು ಗಂಟೆಗೆ ಹಾಲಿಗೆ ಕ್ಯೂ ನಿಲ್ಲಲು ಎದ್ದುಬಿಡುತ್ತಾರೆ. ಹಗಲು ಒಂದು ನಿಮಿಷವೂ ಬಿಡುವಿಲ್ಲದ ದುಡಿಮೆ. ಕುಟುಂಬ ವರ್ಗದಲ್ಲಿ ಅವರ ಹೊಂದಿಕೊಳ್ಳುವ ಗುಣ, ತಾಳ್ಮೆ ನಿರೀಕ್ಷಿಸದೆ ಕೊಡುವ ಸ್ವಭಾವ ವಿವೇಚನೆಗಳಂತೂ ಇತ್ತೀಚೆಗೆ ನಮ್ಮ ದೇಶದಲ್ಲಿ ಅಪರೂಪವಾಗುತ್ತಿರುವ ಗುಣಗಳು. ಅತ್ಯಾಧುನಿಕವಾದ ಗೃಹೋಪಯೋಗಿ ಯಂತ್ರ ಅನುಕೂಲ ಗಳು ಅವರಲ್ಲಿಲ್ಲ. ಔದಾರ್ಯವೊಂದಿದ್ದರೆ ಇವುಗಳಾವುವೂ ಬೇಕಿಲ್ಲ.

ತಾನು ತನ್ನ ಗಂಡ ಒಬ್ಬರೋ ಇಬ್ಬರೋ ಮಕ್ಕಳಿಗೆ, ಅದೂ ಹೆಣ್ಣಾಳಿನ ಸಹಾಯ ಪಡೆದು, ಅಡುಗೆ ಮಾಡಿಟ್ಟ ಮೇಲೆ ಯಾರಾದರೂ ಅನಿರೀಕ್ಷಿತ ಅತಿಥಿ ಬಂದರೆ ಅವರನ್ನು ಊಟಕ್ಕೆ ಎಬ್ಬಿಸದೆ, ಎಬ್ಬಿಸಬೇಕೆಂದು ಗಂಡ ಇಚ್ಛೆಪಟ್ಟರೂ ಅವಕಾಶ ಕೊಡದೆ 'ಮೊದಲೇ ತಿಳಿಸದೆ ಬರುವ ಅವರೆಂಥವರು? ಮತ್ತೆ ಮತ್ತೆ ಮಾಡುವುದೆಂದರೆ ನಾನೇನು ಆಳೆ? ಹೋಟೇಲು ಗಳು ಇರುವುದೇಕೆ? ಗೃಹಿಣಿಯನ್ನು ಹೀಗೆ ಶೋಷಿಸಬಾರದು' ಎಂದು ಮುಂತಾದ ಮಾತು ಗಳನ್ನಾಡುವ, ಒಂದು ಮಧ್ಯಾಹ್ನದ ನಿದ್ರೆ ತಪ್ಪಿದರೆ, ರಾತ್ರಿ ಮಲಗುವುದು ಅರ್ಧ ಗಂಟೆ ತಡವಾದರೆ, ಬರುತ್ತೇನೆಂದ ಅತಿಥಿಯ ಬಸ್ಸು ಅರ್ಧ ಗಂಟೆ ತಡವಾದರೆ, ಬೋನಿನೊಳಗೆ ತಡಕಾಡುವ ಹೆಣ್ಣು ಚಿರತೆಯಂತೆ ಆಡುವ ಗೃಹಿಣಿಯರೇ ಇತ್ತೀಚೆಗೆ ಹೆಚ್ಚಾಗುತ್ತಿದ್ದಾರೆ. ಗೃಹಿಣಿಯರು, ಉದ್ಯೋಗಸ್ಥ ಮಹಿಳೆಯರಲ್ಲ. ಸತ್ಯವತಿಯವರು ಬೆಂಗಳೂರು ವಿಶ್ವೇಶ್ವರಪುರದಲ್ಲಿ ಹುಟ್ಟಿ ಬೆಳೆದವರು. ಬೆಂಗಳೂರಿನಲ್ಲೇ ಹೈಸ್ಕೂಲು ಓದಿದವರು. ಆಧುನಿಕತೆಯ ಸ್ವಾರ್ಥ ಅವರಲ್ಲಿ ಬರಲೇ ಇಲ್ಲ. ಅದು ಅವರಂಥ ಕೆಲವೇ ಮಂದಿಗೆ ಬಂದ ಅಪರೂಪದ ಹುಟ್ಟುಗುಣ.

ಕೆಲವು ವರ್ಷಗಳಿಂದ ಗೋವಿಂದರಾಯರು ಮನೆಬಿಟ್ಟು ಹೊರಗೆ ಹೋಗುತ್ತಿರಲಿಲ್ಲ. ನಾನು ಹೋದ ತತ್‌ಕ್ಷಣ ಅಡುಗೆಮನೆಗೆ ಹೊರಟು ನಿಲ್ಲುತ್ತಿದ್ದರು. ಭೈರಪ್ಪನವರು ಬಂದಿದ್ದಾರೆ. ಅವರಿಗೆ ಖಾರ ಕಡಿಮೆ...' ಎನ್ನುತ್ತಿದ್ದರು. 'ನನಗೆ ಗೊತ್ತು' ಎಂದು ಸಹಧರ್ಮಿಣಿ ಹೇಳುತ್ತಿದ್ದರು. 'ನೀನು ಆಕಸ್ಮಾತ್ ಮರೆತುಬಿಡಬಹುದು ಅಂತ ಜ್ಞಾಪಿಸುತ್ತಿದೀನಿ' ಇವರೆನ್ನುತ್ತಿದ್ದರು. 'ನನಗೆ ಜ್ಞಾಪಕವಿದೆ, ನೀವು ಅವರ ಕೈಲಿ ಮಾತನಾಡುತ್ತಿರಿ' ಎಂದು ಅವರು ಹೇಳುತ್ತಿದ್ದರು. ನನ್ನ ಹತ್ತಿರ ಬಂದು ಐದು ನಿಮಿಷ ಮಾತಾಡಿದ ಮೇಲೆ ಮತ್ತೆ ಅಡುಗೆಮನೆಗೆ ಹೋಗಿ, 'ಭೈರಪ್ಪ ನವರಿಗೆ ಖಾರ ಕಡಿಮೆ ಹಾಕಬೇಕು. ನೆನಪಿದೆ ತಾನೆ?' ಎನ್ನುತ್ತಿದ್ದರು. 'ಈಗ ತಾನೆ ನೀವು ಹೇಳಿದಿರಲ್ಲ' ಎಂದರೆ, 'ಹೌದಾ? ಹಾಗಾದರೆ...' ಎಂದು, 'ಆದರೂ ಜ್ಞಾಪಿಸುವುದು ಒಳ್ಳೆಯದು ಅಂತ...' ಅಲ್ಲೇ ನಿಲ್ಲುತ್ತಿದ್ದರು. ಸತ್ಯವತಿಯವರು ಅಡುಗೆಮನೆಯಿಂದ ಹೊರಗೆ ಬಂದು, 'ನೋಡಿ, ಇವರಿಗೆ ಎಷ್ಟು ಬೇಗ ಮರೆತುಹೋಗುತ್ತೆ! ಕೇಳಿದಿರಾ?' ಎಂದು ನನಗೆ ಹೇಳುತ್ತಿದ್ದರು. 'ಇವಳಿಗೂ ಇತ್ತೀಚೆಗೆ ಜ್ಞಾಪಕ ಶಕ್ತಿ ಕುಂದುತ್ತಿದೆ' ಯಜಮಾನರು ಉತ್ತರ ಕೊಡುತ್ತಿದ್ದರು.

ಸಾಹಿತ್ಯ ಭಂಡಾರದ ಅಂಗಡಿ ಇರುವುದು ಬಳೇಪೇಟೆಯ ಒಂದು ಕಿಷ್ಕಿಂಧ ವಿಸ್ತೀರ್ಣದ ಮಳಿಗೆಯಲ್ಲಿ. ಜಾಗ ಸಾಲದು. ತುಸು ದೊಡ್ಡದಾದ ಒಂದು ಜಾಗ ಹಿಡಿಯಲು ನಾಲ್ಕೈದು ಲಕ್ಷ ಮುಂಗಡವನ್ನೇ ಕೊಡಬೇಕು. ಮಾರ್ವಾಡಿಗಳು ಕಪ್ಪು ವ್ಯಾಪಾರಿಗಳು ಚಾಲ್ತಿಗೆ ತಂದು ನಿರ್ಧರಿಸಿರುವ ಧಾರಣೆ ಅದು. ಗೋವಿಂದರಾಯರಂಥ ನೀತಿ ನಿಷ್ಠೆಯ ವ್ಯಾಪಾರಿಗಳು

ಎಲ್ಲಿಂದ ತರಬೇಕು? ಅವರು ಇದ್ದದ್ದು, ಅವರ ಕುಟುಂಬವು ಈಗ ಇರುವುದೂ ಬಾಡಿಗೆ ಮನೆಯಲ್ಲೇ. ನಾನು ನೋಡಿದಂತೆ ಬೆಂಗಳೂರಿನಲ್ಲಿ ಅದು ಐದನೆಯ ಮನೆ. ಕನ್ನಡಕ್ಕೆ ದುಡಿದವರಿಗೆ ಆದ್ಯತೆಯ ಮೇರೆಗೆ ನಿವೇಶನ ಕೊಡುವುದಾಗಿ ರಾಮಕೃಷ್ಣ ಹೆಗಡೆಯವರು ಮುಖ್ಯಮಂತ್ರಿಗಳಾಗಿದ್ದಾಗ ಘೋಷಿಸಿದ್ದರು. ಗೋವಿಂದರಾಯರ ಪ್ರವರವನ್ನು ವಿವರಿಸಿ ಅವರಿಗೊಂದು ನಿವೇಶನ ಕೊಡಿಸಿಕೊಡುವಂತೆ ನಾನು ಹೆಗಡೆಯವರಿಗೆ ಕಾಗದ ಬರೆದೆ. ಅವರು ತತ್‌ಕ್ಷಣ ಉತ್ತರಿಸಿ ನನ್ನ ಕಾಗದವನ್ನು ಬಿ.ಡಿ.ಎ.ಗೆ ರವಾನಿಸಿರುವುದಾಗಿ ತಿಳಿಸಿ ತಾವು ಬಿ.ಡಿ.ಎ. ಅಧ್ಯಕ್ಷರಿಗೆ ಆ ಬಗೆಗೆ ಬರೆದ ಶಿಫಾರಸು ಪತ್ರದ ನಕಲನ್ನೂ ನನಗೆ ಕಳಿಸಿದ್ದರು. ನಾನು ಆ ಐ.ಎ.ಎಸ್. ಅಧ್ಯಕ್ಷರನ್ನು ಕಂಡೆ. 'ಹೊಸ ಲೇಔಟ್‌ಮಾಡಿದಾಗ ನೋಡೋಣ' ಎಂದು ಇಂಗ್ಲೀಷಿನಲ್ಲೇ ಉತ್ತರಿಸಿದರು. 'ಮುಖ್ಯಮಂತ್ರಿಗಳ ಕಾಗದದ ಅರ್ಥ ಅದಲ್ಲ' ಎಂದೆ. 'ತಾವು ಮುಖ್ಯಮಂತ್ರಿಗಳಿಂದಲೇ ಒಂದು ಹುಕುಂ ತಂದುಬಿಡಿ. ಆಡಳಿತ ಕಷ್ಟ, ಕ್ರಮಗಳೇ ಬೇರೆ' ಎಂದರು. ಆಗ ವಸತಿಗಳ ಸಚಿವರಾಗಿ ಎಂ.ಪಿ. ಪ್ರಕಾಶರಿದ್ದರು. ಅವರು ಸಾಹಿತ್ಯಾಭಿಮಾನಿ, ನನ್ನ ಸಾಹಿತ್ಯದ ಅಭಿಮಾನಿ ಎಂದೂ ಕೇಳಿದ್ದೆ. ಎಂದೂ ಯಾವ ಸ್ವಂತ ಕೆಲಸಕ್ಕೂ ಯಾವ ರಾಜಕಾರಣಿಯನ್ನೂ ನೋಡದ ನಾನು ಅವರ ಮನೆಗೆ ಹೋದೆ. ಪ್ರಕಾಶರು ತುಂಬ ಗೌರವ, ಸೌಜನ್ಯದಿಂದ ಮಾತನಾಡಿಸಿದರು. ಸರಕಾರವೇ ಕಟ್ಟಿಸಿರುವ ಮನೆಗಳಲ್ಲಿ ಒಂದನ್ನು ಆರಿಸಿ, ಕೊಟ್ಟುಬಿಡುತ್ತೇನೆ ಎಂದರು. ಆದರೆ ಆ ಮನೆ ಗೋವಿಂದರಾಯರ ಕುಟುಂಬಕ್ಕೆ ಸ್ವಲ್ಪವೂ ಅನುಕೂಲಕರವಾಗಿರಲಿಲ್ಲ. ನಿವೇಶನವನ್ನೇ ಕೊಡಿಸಿ ಎಂದೆ. 'ನಿವೇಶನ ಕೊಡಿಸುವ ಅಧಿಕಾರ ಮುಖ್ಯಮಂತ್ರಿಗಳಿಗೆ ಮಾತ್ರ ಇದೆ. ಅವರನ್ನೇ ಕಾಣೋಣ ಬನ್ನಿ' ಎಂದು ಕರೆದೊಯ್ದರು. ಅವರನ್ನು ಕಾಯ್ದು ಅವರು ಬರುವ ಜಾಡು ಹಿಡಿದು ಜನತಾದಳದ ಕಛೇರಿಯಲ್ಲಿ ಹೆಗಡೆಯವರನ್ನು ಕಂಡು ಅವರ ಕಾಗದವನ್ನು ತೋರಿಸಿ ಎಲ್ಲವನ್ನೂ ವಿವರಿಸಿದೆ. ಹೆಗಡೆಯವರು ಮೌನವಾಗಿ ನಮ್ಮ ಅರ್ಥವೇ ಪಲ್ಲಟವಾಗುವಂತೆ ಮುಗುಳ್ನಕ್ಕು, 'ಆಗಲಿ, ನನಗೆ ಬಿಡಿ' ಎಂದು ಪ್ರಕಾಶರತ್ತ ನೋಡಿದರು. ಮುಂಬಯಿ ದಿಲ್ಲಿಗಳ ಚಲನಚಿತ್ರ ನಟನಟಿಯರಿಗೆ, ಟೆಲಿವಿಶನ್‌ನಲ್ಲಿ ಸುದ್ದಿ ಓದುವವರಿಗೆಲ್ಲ ಹೆಗಡೆಯವರು ನಿವೇಶನಗಳನ್ನು ಕೊಡಿಸಿದ್ದಾರೆಂದು ಆಗಿನ ಪತ್ರಿಕೆಗಳಲ್ಲಿ ಓದಿದ್ದ ನಾನು ಒಬ್ಬ ಪ್ರಾಮಾಣಿಕ ಕನ್ನಡ ಪ್ರಕಾಶಕರಿಗೆ ಕೊಟ್ಟೇ ಕೊಡುತ್ತಾರೆಂಬ ಭರವಸೆ ತಾಳಿದೆ. ಪ್ರಕಾಶರ ಮೂಲಕ ಅದನ್ನು ಜ್ಞಾಪಿಸಲು ತಕ್ಕ ಫಾರಂನಲ್ಲಿ ಅರ್ಜಿ ಬರೆದು ಸಲ್ಲಿಸಲು ಗೋವಿಂದರಾಯರ ಮೂರನೆಯ ಮಗ ಅರುಣನನ್ನು ಬಿಟ್ಟೆ. ಅರುಣ ಅವರ ಮನೆ ಬಾಗಿಲು ಕಾದ. ಎರಡು ಸಲ ಭೇಟಿಯೂ ಮಾಡಿದ. ಗೋವಿಂದರಾಯರಿಗೆ ಏನೂ ಸಿಗಲಿಲ್ಲ.

೨೭-೪-೯೩ರಂದು ನನಗೆ ಬೆಂಗಳೂರಿಗೆ ಹೋಗುವ ಕೆಲಸವಿತ್ತು. ತಪ್ಪದೆ ಮನೆಗೆ ಬಂದು ಹೋಗಬೇಕೆಂದು ಗೋವಿಂದರಾಯರು ಹೇಳಿಕಳಿಸಿದರು. ಜಯನಗರದ ಕಡೆ ಕೆಲಸವಿದ್ದಾಗ ಗೋವಿಂದರಾಯರ ಮನೆಯಲ್ಲಿ ಉಳಿಯುವುದು, ಇಲ್ಲದಿದ್ದರೆ ಎಂ.ಪಿ. ನಾಗರಾಜನ ಮನೆಯಲ್ಲಿ ಉಳಿಯುವುದು ನನ್ನ ಪದ್ಧತಿ. ಹೋಗಿ ಗೋವಿಂದರಾಯರನ್ನು ನೋಡಿದೆ. ಇತ್ತೀಚೆಗೆ ಅವರ ಶರೀರ ಜೀರ್ಣವಾಗುತ್ತಿತ್ತು. ಕಣ್ಣುಗಳಲ್ಲಿ ಪೊರೆ ಬೆಳೆಯುತ್ತಿತ್ತು. ಆದರೆ

ಶಸ್ತ್ರಚಿಕಿತ್ಸೆ ಮಾಡಿ ತೆಗೆದುಹಾಕುವಷ್ಟು ಬಲಿತಿರಲಿಲ್ಲ. ಕಿವಿಗಳು ಸರಿಯಾಗಿ ಕೇಳುತ್ತಿರಲಿಲ್ಲ. ಬಹಳ ಜೋರಾಗಿ ಮಾತನಾಡಿದರೆ ಮಾತ್ರ ಕೇಳುತ್ತಿತ್ತು. ಹೀಗಾಗಿ ಹೊರ ಜಗತ್ತಿನ ಸಂಬಂಧವೂ ಅವರಿಗೆ ಸಾಕಷ್ಟು ಕಡಿಮೆಯಾಗಿತ್ತು. ಕಷ್ಟಪಟ್ಟು ಮನೆಯೊಳಗೇ ಹತ್ತು ಹೆಜ್ಜೆ ತಿರುಗಾಡಿ ಮತ್ತೆ ಮಂಚದ ಮೇಲೆ ಕೂರುತ್ತಿದ್ದರು. ಶರೀರವು ಕುಗ್ಗುತ್ತಿತ್ತು. ನಾನು ಹೋಗಿ ಅವರ ಮಂಚದ ಎದುರಿಗಿದ್ದ ಕುರ್ಚಿಯ ಮೇಲೆ ಕುಳಿತೆ. 'ಇಲ್ಲೇ, ಮಂಚದ ಮೇಲೆ ಕೂರಿ. ಬನ್ನಿ' ಎಂದರು. ಮೇಲೆದ್ದು ಅವರ ಪಕ್ಕದಲ್ಲಿ ಕೂತೆ, ಅವರ ಕಿವಿಯ ಹತ್ತಿರಕ್ಕೆ ಮುಖ ತಿರುಗಿಸಿ ಮಾತನಾಡಲು ಅನುಕೂಲವಾಗುವಂತೆ. ಅವರು ನನ್ನ ಎರಡು ಕೈಗಳನ್ನೂ ತಮ್ಮ ಎರಡೂ ಕೈಗಳಲ್ಲಿ ಜೋಡಿಸಿ ಹಿಡಿದು ಹೇಳಿದರು:

'ವೈದ್ಯರು ಹೇಳಿದರು: ನಿಮಗೆ ಜೀವನದ ಕೊನೆಯ ಹಂತ ಬಂದಿದೆ. ಕೆಲವರಿಗೆ ಈ ಹಂತ ನಾಲ್ಕಾರು ವರ್ಷ ಇರುತ್ತೆ. ಕೆಲವರಿಗೆ ಬೇಗ ಮುಗಿಯುತ್ತೆ. ದೇಹ ಒಳಗೇ ನಶಿಸೋದು ಪ್ರಕೃತಿನಿಯಮ. ನಿಮ್ಮನ್ನು ಕಂಡು ಮಾತನಾಡಬೇಕು ಅಂತ ಒಂದು ತಿಂಗಳಿನಿಂದ ಬಾಧಿಸುತ್ತಿತ್ತು. ನಮ್ಮ ನಿಮ್ಮ ಸಂಬಂಧವಾಗಿ ಮೂವತ್ತೈದು ವರ್ಷವಾಯಿತು. ದೇವರೇ ನಿಮ್ಮನ್ನು ನನ್ನ ಹತ್ತಿರಕ್ಕೆ ಕಳಿಸಿದ ಅಂತ ನಂಬಿದೀನಿ. ನಾನು ಯಾವ ತಪ್ಪು ಮಾಡಿದ್ದರೂ ನೀವು ಕ್ಷಮಿಸಬೇಕು.'

ಪರಸ್ಪರ ಅಂತರಂಗ ಶುದ್ಧಿಯೇ ಆಧಾರವಾಗಿದ್ದ ನಮ್ಮ ಸಂಬಂಧವನ್ನು ಅವರು ಆ ಕ್ಷಣದಲ್ಲೇ ಶುದ್ಧಿಯ ಇನ್ನಷ್ಟು ಎತ್ತರಕ್ಕೆ ಎತ್ತಿದರು ಎಂಬ ಭಾವ ನನ್ನಲ್ಲಿ ತುಂಬಿಕೊಂಡಿತು. ಪೊರೆ ಬೆಳೆದ ಅವರ ಕಣ್ಣುಗಳು ಜಿನುಗುತ್ತಿದ್ದವು. ನನ್ನ ಕಣ್ಣುಗಳೂ ತುಂಬಿಕೊಂಡವು. ಅವರು ಈಗ ಹೇಳಿದುದು ಇಷ್ಟು ಬೇಗ ಬೀಳ್ಕೊಡುಗೆಯ ಮಾತಾಗದಿರಲಿ, ಎಂದು ನನ್ನೊಳಗೇ ಮೌನವಾಗಿ ಪ್ರಾರ್ಥಿಸಿದೆ.

ಜೂನ್ ೨೧ರಂದು ನಾನು ಸುಮಾರು ಮೂರು ತಿಂಗಳ ಅವಧಿಗೆ ವಿದೇಶಕ್ಕೆ ಹೋಗಬೇಕಾಗಿತ್ತು. ಗೋವಿಂದರಾಯರ ಆರೋಗ್ಯ ದಿನೇ ದಿನೇ ಕ್ಷೀಣಿಸುತ್ತಿತ್ತು. ನಾನು ಹಿಂತಿರುಗುವ ವೇಳೆಗೆ ಅವರು ಇರುತ್ತಾರೋ ಇಲ್ಲವೋ ಎಂಬ ಆತಂಕದಲ್ಲೇ ಪ್ರಯಾಣ ಮಾಡಿದೆ. ಅಲ್ಲಿಂದ ಆಗಾಗ್ಗೆ ಫೋನ್‌ನಲ್ಲಿ ವಿಚಾರಿಸುತ್ತಿದ್ದೆ. 'ಅಪ್ಪನ ಸ್ಥಿತಿ ಇವತ್ತೋ ನಾಳೆಯೋ ಅನ್ನುವ ಹಾಗಿದೆ' ಎಂದು ಅವರ ಮಗ ರಾಜ ಜುಲೈ ಮೊದಲವಾರ ಹೇಳಿದರು. ಹೋದ ಕೆಲಸ ಮುಗಿಸದೆ ನಾನು ಭಾರತಕ್ಕೆ ಬಂದು ಮತ್ತೆ ಹಿಂದಿರುಗುವುದು ಕಾರ್ಯತಃ ಸಾಧ್ಯವಿರಲಿಲ್ಲ. ಅಂತೂ ಜುಲೈ ೧೧ರಂದು ಗೋವಿಂದರಾಯರು ಈ ಪ್ರಪಂಚವನ್ನು ಬಿಟ್ಟರು.

ಆಗ ಅವರಿಗೆ ೮೮. ವಯಸ್ಸಿನಿಂದ ಮಾತ್ರವಲ್ಲ, ಭಾವನಾತ್ಮಕವಾಗಿ ಅವರು ನನಗೆ ಹಿರಿಯರಾಗಿದ್ದರು. ಕೆಲವು ಗಟ್ಟಿಮೌಲ್ಯಗಳ ಜೀವಂತ ಪ್ರತ್ಯಕ್ಷವಾಗಿದ್ದರು. ನನಗೂ ಸಾವಿಗೂ ನಡುವಣ ಮರೆಯಾಗಿದ್ದರು. ಅವರು ಹೋದ ಅನಂತರ ಆತ್ಮೀಯ ವರ್ತುಲದಲ್ಲಿ ನನಗೆ ಹಿರಿಯರೆಂದು ನಾನು ಭಾವಿಸಬಹುದಾದ ಬೇರಾವ ವ್ಯಕ್ತಿಯೂ ಇಲ್ಲ. ಆ ನಡುವಣ ಮರೆಯು ಹೊರಟುಹೋಗಿ ಇನ್ನು ನಾನೇ ಹಿರಿಯ ಎಂಬ ಸರದಿಯ ಭಾವನೆಯು ತುಂಬಿಕೊಂಡಿತು.

## ಇದು ನನ್ನ ಕಥೆ

**-ಸಾಹಿತ್ಯ ಭಂಡಾರ**

ನಾನು ಸಾಹಿತ್ಯ ಭಂಡಾರ. ಇಷ್ಟು ದಿನ ನನ್ನ ಕಥೆಯನ್ನು ನಾನು ಯಾರ ಹತ್ತಿರವೂ ಹೇಳಿಕೊಂಡಿರಲಿಲ್ಲ, ಹೇಳಿಕೊಳ್ಳುವಂಥ ಸಂದರ್ಭವೂ ಬಂದಿರಲಿಲ್ಲ. ನನ್ನನ್ನು ತನ್ನ ಜೀವದ ಜೀವ ಎಂಬಂತೆ ನೋಡಿಕೊಳ್ಳುತ್ತ ಬಂದ ಮ. ಗೋವಿಂದರಾವ್ ಎರಡು ವರ್ಷಗಳ ಹಿಂದೆ ನನ್ನಿಂದ ಅಗಲಿ ಮತ್ತೆಂದೂ ಮರಳಿ ಬಾರದ ಎಡೆಗೆ ಹೋಗಿ ನಾನೀಗ ನನ್ನ ಕಥೆಯನ್ನು ಹೇಳಿಕೊಳ್ಳುವಂಥ ಅನಿವಾರ್ಯ ಸಂದರ್ಭ ಒದಗಿದೆ. ಇನ್ನೊಂದು ಕಾರಣವೆಂದರೆ ಈ ಪುಸ್ತಕದ ಸಂಪಾದಕರು, 'ನಾನೂ ನಾಲ್ಕು ಮಾತು ಹೇಳಬೇಕು'-ಎಂದು ಅಪೇಕ್ಷಿಸಿದ್ದಾರೆ.

ನನ್ನ ಕಥೆಯನ್ನು ಓದಲು ಆರಂಭಿಸಿರುವ ಓದುಗರೇ, ನನ್ನನ್ನು ಒಂದು ಭಂಡಾರವಾಗಿ ರೂಪಿಸಿದ ಗೋವಿಂದರಾವ್ ಎಂಬ ವ್ಯಕ್ತಿ ಎಂಥ ಸ್ವಭಾವದವ ಎಂದು ಈಗಾಗಲೇ ನಿಮಗೆ ಈ ಹಿಂದಿನ ಪುಟಗಳ ವಾಚನದಿಂದ ತಿಳಿದಿರಬಹುದು. ತೆಳ್ಳನೆಯ ನೀಳ ಶರೀರದಲ್ಲಿ ಈ ಗೋವಿಂದರಾವ್ ತುಂಬಿಕೊಂಡಿದ್ದ ಚೈತನ್ಯ ಹಲವರಿಗೆ ಹಲವು ಬಗೆಯಾಗಿ ಕಂಡಿದ್ದರೂ ನನಗೆ ಮಾತ್ರ ಇದು 'ನನ್ನದೇ ಚೈತನ್ಯ' ಎಂಬಂತಿತ್ತು.

ಈ ಗೋವಿಂದರಾವ್ ನನಗೆ ಒಂದು ಸಣ್ಣ ರೂಪು ಕೊಟ್ಟದ್ದು ೧೯೩೪ರ ಯುಗಾದಿಯಂದು ಹುಬ್ಬಳ್ಳಿಯಂಥ ವಣಿಜರ ಪುರದಲ್ಲಿ, ಕೊಪ್ಪಿಕರ್ ಬೀದಿಯಂಥ ಈ ನಗರದ ಕೇಂದ್ರ ತಾಣದಲ್ಲಿ ನನ್ನನ್ನು ಒಂದು ಕಿರು ಕೋಣೆಯಲ್ಲಿ ಮೊಟ್ಟಮೊದಲಿಗೆ ಎಲ್ಲರೆದುರಿಗೆ ನಿಲ್ಲುವಂತೆ ತೆರೆದಿಡಲಾಯಿತು.

ಗೋವಿಂದರಾವ್ ನನ್ನಲ್ಲಿ ಮೊದಲಿನಿಂದಲೂ ಉತ್ತಮ ಗುಣಮಟ್ಟದ ಕೃತಿಗಳಿಗೇ ಸ್ಥಾನ ನೀಡುತ್ತ ಬಂದ. ಕೀಳು ಅಭಿರುಚಿಯನ್ನು ಹುಟ್ಟಿಸುವ ಪುಸ್ತಕಗಳನ್ನು ನನ್ನಿಂದ ದೂರದಲ್ಲಿಯೇ ಇರಿಸಿದ. ಉತ್ತಮ ಕೃತಿಗಳು ಓದಿನಲ್ಲಿ ತಿಳಿವಿನ ಹರಹನ್ನು ವಿಸ್ತರಿಸುವುದಷ್ಟೇ ಅಲ್ಲ; ಒಮ್ಮೆ ಓದಿದರೆ ಮತ್ತೊಮ್ಮೆ ಓದಬೇಕು ಎಂಬ ತುಡಿತದಿಂದ ಆಗಾಗ ಈ ಗ್ರಂಥಗಳನ್ನು ತೆರೆದು ನೋಡುತ್ತ ತಾನು ಓದಿದ ವಿಷಯದ ಬಗೆಗೆ ತನ್ನಲ್ಲಿ ಚಿಂತನೆ-ಮಂಥನಗಳೊಂದಿಗೆ ಒಮ್ಮೆ ಓದಿದ ಓದನ್ನು ಮರುಪರೀಕ್ಷೆಗೆ ಒಡ್ಡಿಕೊಳ್ಳುವ ಗುಣವನ್ನು ಹೊಂದಿರುತ್ತವೆ. ಅಷ್ಟೇ ಅಲ್ಲ ಇಂಥ ಕೃತಿಗಳಿಗೆ ತಮ್ಮ ಮನೆಗಳಲ್ಲಿ ಒಂದು ಸ್ಥಾನ ನೀಡಿ ಇರಿಸಿಕೊಳ್ಳುವುದು ತಮಗೆ ಒಂದು ತೆರನ ಗೌರವವೂ ಹೌದು ಎಂಬ ಭಾವನೆಯನ್ನು ತೋರಿಕೊಳ್ಳುತ್ತವೆ. ಇದಕ್ಕೆಂದೇ ಗೋವಿಂದ ರಾವ್ ಮೊದಲಿನಿಂದಲೇ ನನ್ನಲ್ಲಿ ಗುಣಮಟ್ಟದ ಕೃತಿಗಳಿಗೇ ಆದ್ಯತೆ ನೀಡುತ್ತ ಬಂದ.

ಆಗ ಈತ ಪುಸ್ತಕಗಳ ಮಾರಾಟ ಮಾಡಲು ಹಳ್ಳಿ ಹಳ್ಳಿಗಳನ್ನು ಸುತ್ತುತ್ತಿದ್ದ. ತಾನು ಹೀಗೆ ಹಳ್ಳಿಗಳಿಗೆ ಮಾರಾಟಕ್ಕೆಂದು ಹೋದಾಗ ಅಂಗಡಿಯಲ್ಲಿ ಇರಲಿ ಎಂದು ತನ್ನ ತಮ್ಮ ಅನಂತಮೂರ್ತಿಯನ್ನು ಅಂಗಡಿಯಲ್ಲಿ ಬಿಟ್ಟು, ಒಂದು ಪೆಟ್ಟಿಗೆಯಲ್ಲಿಯೋ, ಚೀಲದಲ್ಲಿಯೋ ಪುಸ್ತಕಗಳ ಪ್ರತಿಗಳನ್ನು ತುಂಬಿಕೊಂಡು ಹೊರಡುತ್ತಿದ್ದ. ಹಳ್ಳಿಗಳಿಗೆ ಹೋಗಿ ಅಲ್ಲಿನ ಸಂಘ

ಸಂಸ್ಥೆಗಳು, ಓದಿನ ಅಭಿರುಚಿಯಿರುವವರನ್ನು ಹುಡುಕುತ್ತ, ಪರಿಚಿತರ ಮನೆಗಳಿಗೆ ಹೋಗಿ ತಂಗುತ್ತ, ಪರಿಚಯ ಇಲ್ಲದೆಡೆಗಳಲ್ಲಿ ಅಲ್ಲಲ್ಲಿನವರು ಕೇಳಿ ಮಾತಾಡುವ ಮಾತುಗಳಿಗೆ ತಾಳ್ಮೆಯಿಂದ ಮಾತಿಗೆ ತೊಡಗಿ 'ಓದುವುದೂ ಬದುಕಿನ ಒಂದು ಭಾಗ, ಪುಸ್ತಕಗಳು ಕೂಡ ಜೀವನದ ಆವಶ್ಯಕ ವಸ್ತುಗಳಲ್ಲಿ ಪ್ರಮುಖವಾಗಿ ನಿಮ್ಮೊಂದಿಗೆ ಇರಬೇಕಾದವು' ಎಂಬ ಅಂಶವನ್ನು ಅವರಿಗೆ ಮನಗಾಣಿಸುತ್ತ, ಅವರ ಕಷ್ಟ, ಸುಖಗಳನ್ನು ವಿಚಾರಿಸುತ್ತ ಊರಿಂದೂರಿಗೆ ಸಾಗುತ್ತಿದ್ದ. ಆಗ ಪುಸ್ತಗಳ ಬೆಲೆಯನ್ನು ಕೊಡಲು ಸಾಧ್ಯವಾಗದವರಿಗೆ, ಕೊಳ್ಳಬೇಕು ಎಂಬ ಹಂಬಲದವರಿಗೆ ತನ್ನಲ್ಲಿದ್ದ ಪುಸ್ತಕಗಳನ್ನು ಕೊಡುವುದು, ಅವರಿಂದ ಕೊಟ್ಟಾಗ ಹಣ ಪಡೆಯುವುದೂ ಗೋವಿಂದ ರಾಯನ ವ್ಯಾಪಾರದಲ್ಲಿ ಸೇರಿತ್ತು. ಇದು ಸಾಲ ಎಂಬಂತಿರಲಿಲ್ಲ; ನಂಬಿಕೆಯನ್ನು ಅವಲಂಬಿಸಿದ ನಡೆಯಾಗಿತ್ತು.

ಬರಿಯ ಮಾರಾಟ ಮಾಡಿದರೆ ಆಯಿತೇ? ಮಾರಾಟದೊಂದಿಗೆ ಪುಸ್ತಕಗಳನ್ನು ತಾನೇ ಪ್ರಕಟಗೊಳಿಸುವ ಸಾಹಸಕ್ಕೂ ಈ ದಿನಗಳಲ್ಲಿಯೇ ಗೋವಿಂದರಾಯ ಅಡಿಯಿಟ್ಟ. ಸೇವಾ ಭಾವನೆಯನ್ನು ಒಂದು ಶಿಸ್ತುಬದ್ಧ ನೆಲೆಯಲ್ಲಿ ರೂಪುಗೊಳಿಸಿದ 'ಸ್ವಯಂ ಸೇವಾ ದಳ'ವನ್ನು ಕಟ್ಟಿದ ನಾರಾಯಣ ಸುಬ್ಬರಾವ್ ಹರಡೀಕರ ಅವರ ಜೀವನ ಕುರಿತು ಕರಿಗುದರಿ ಎಂಬಾತ ಬರೆದ, 'ನಾ.ಸು. ಹರಡೀಕರ' ಎಂಬ ಕೃತಿಯನ್ನು ನನ್ನ ಹೆಸರಿನ ಮೊದಲ ಪ್ರಕಟಣೆಯಾಗಿ ಗೋವಿಂದರಾಯ ಪ್ರಕಾಶನಗೊಳಿಸಿದ. ಇದರ ಬಗೆಗೆ ಬಂದ ಪ್ರತಿಕ್ರಿಯೆಗಳಿಂದ ಉತ್ತೇಜಿತನಾದ ಗೋವಿಂದರಾಯ ಅನಂತರ ಪ್ರಕಟಣೆಯತ್ತಲೂ ಹೆಚ್ಚಿನ ಮನಸ್ಸು ಹರಿಸಿದ.

ಸುಪ್ರಸಿದ್ಧ ಕವಿ ಬೇಂದ್ರೆ ಎಂಬುವನನ್ನು ಈ ಗೋವಿಂದರಾಯ ಧಾರವಾಡದ ಸಾಧನಕೇರಿಯಿಂದ ಹುಬ್ಬಳ್ಳಿಯ ಕೊಪ್ಪಿಕರ್ ಬೀದಿಯ ನನ್ನ ಅಟ್ಟಕ್ಕೆ ಕರೆತಂದು ಗೆಳೆಯರೊಂದಿಗೆ ಮಾತು ಮಾತಿನ ಹರಟೆಗೆ ತೊಡಗಿಸಿ, ಅವರು ನಾಟಕ ಬರೆವಂತೆ ಮಾಡಿ ಹೀಗೆ ಬರೆದದ್ದನ್ನು 'ಹುಚ್ಚಾಟಗಳು' ಎಂದು ಪ್ರಕಟಗೊಳಿಸಿದ.

ಪುಸ್ತಕ ಮಾರಾಟದ ಜೊತೆಗೆ ನಾನು ಪ್ರಕಾಶನಕ್ಕೂ ಇಳಿದದ್ದು ಆಗ ಒಂದು ಸಾಹಸವೇ ಆಗಿತ್ತು. ಗೋವಿಂದರಾಯನಲ್ಲಿ, ಪ್ರಕಾಶನಕ್ಕೆ ಇಳಿಯುವಷ್ಟು ಹಣ ಇರಲಿಲ್ಲ ನಿಜ. ಆದರೆ ಒಮ್ಮೆ ನಿರ್ಧರಿಸಿ ಆ ಕಾರ್ಯಕ್ಕೆ ತೊಡಗಿದರೆ ಅದ್ಹೇಗೋ ಆ ಸಂದರ್ಭಗಳಲ್ಲಿ ಹಣ ಒದಗಿ ಬರುತ್ತಿತ್ತು. ಇದು ಈಗಲೂ ನನಗೆ ಆಶ್ಚರ್ಯ ತರಿಸುತ್ತಿದೆ. ಜಗತ್ತೇ ಗಡಗಡ ನಡುಗಿಹೋದ ಭಾರಿ ಯುದ್ಧವೊಂದು ನಡೆದದ್ದು ನಿಮಗೆ ಗೊತ್ತೇ ಇದೆ. ಹಿರೋಷಿಮಾ, ನಾಗಸಾಕಿಯಂಥ ನಗರಗಳ ಮೇಲೆ ಬಾಂಬ್ ಎಸೆದು ಆ ನಗರಗಳು ಬೆಂದು ಸೀಗರಿಗಟ್ಟಿ ಅದೆಷ್ಟು ಮಂದಿ ತಂತಮ್ಮ ಜೀವ ತೆತ್ತರಲ್ಲ...

ಈ ಮಹಾಪಾತಕ ನಡೆದ ದಿನಗಳಲ್ಲಿ ಒಂದೊಂದು ದಿನಗಳೂ ಒಂದೊಂದು ತರನ ಆತಂಕ ಹುಟ್ಟಿಸುತ್ತ ಬದುಕೇ ಕಂಗೆಟ್ಟುಹೋಗಿತ್ತು. ಆಗಂತೂ ಪುಸ್ತಕ ಪ್ರಕಾಶನ ಎನ್ನುವುದು ಉಸಿರಾಡುವ ಜೀವಿಯ ಉಸಿರನ್ನು ಯಾರೋ ಹಿಡಿದು ಆಗೊಮ್ಮೆ ಈಗೊಮ್ಮೆ ಉಚ್ಛ್ವಾಸ-ನಿಚ್ಛ್ವಾಸ ಬಿಡುವಂತೆ ಮಾಡಿತ್ತು. ಅಂಥ ದುರ್ಭರ ಸಂದರ್ಭದಲ್ಲೂ ಗೋವಿಂದರಾಯ ಪುಸ್ತಕಗಳ ಪ್ರಕಟಣೆಯಿಂದ ಹಿಂಸರಿಯಲಿಲ್ಲ. ಮುದ್ರಣಕ್ಕೆ ಕಾಗದ ದೊರೆಯುವುದು ತೀರ

ಕಷ್ಟವಾಗಿ ಪ್ರಕಾಶಕರಿಗೆ ಕೋಟಾ ಮೂಲಕ ಕಾಗದ ಹಂಚಲು ಮಾಡಿದ್ದ ಕಾನೂನನ್ನು ಪ್ರತಿಭಟಿಸಲು 'ಸಾಹಿತ್ಯ ಭಂಡಾರವೆಂಬ ನನ್ನ ಹೆಸರಿಗೆ ಇನ್ನೂ ಒಂದೆರಡು ಹೆಸರುಗಳನ್ನು ಕೂಡಿಸಿಕೊಂಡು ಮುದ್ರಣ ಕಾಗದದ ಕೋಟಾ ಪಡೆಯುತ್ತ ತನ್ನ ಪ್ರಕಾಶನದ ಕಾರ್ಯವನ್ನು ಈ ಗೋವಿಂದರಾಯ ಆಗ ಮುಗಿಸಿದ್ದ.

ನಿಮಗೆ ಈಗಾಗಲೇ ಗೊತ್ತಿರುವಂತೆ ಗೋವಿಂದರಾಯ ತುಂಬ ನಿಷ್ಠುರವಾದಿ. ಖಂಡಿತ ವಾದಿಯೂ ಹೌದು. ಹಾಗೆಯೇ ಗಾಂಧಿ ತತ್ವಕ್ಕೆ ಕಟ್ಟುಬಿದ್ದಿದ್ದ ಜೀವಿ. ಹೀಗಾಗಿ ಈತ ನಿಷ್ಠಾವಂತನೂ ಆಗಿದ್ದ. ನೀತಿ, ನಿಯಮಗಳನ್ನು ತನ್ನ ಬದುಕಿಗೆ ತಾನೇ ಹಾಕಿಕೊಂಡು ಅದರಂತೆ ನಡೆಯುತ್ತಿದ್ದ. ಹೀಗಾಗಿ ವ್ಯಾಪಾರ ಎನ್ನುವುದು ಎಂದೂ ಅತಿ ಆದಾಯ ತರುವೆಡೆಗೆ ಹೊರಳಿ ಕೊಳ್ಳಲಿಲ್ಲ. ಬರುವಷ್ಟು ಆದಾಯದಿಂದಲೇ ಸಂತೃಪ್ತನಾಗಿ ಸಾಮಾನ್ಯ ಜೀವನವನ್ನು ರೂಢಿಸಿ ಕೊಂಡು ಬಂದ. ಇಂಥ ಗೋವಿಂದರಾಯನನ್ನು ಹಲವರು ತಮ್ಮ ಸುಳ್ಳುಗಳಿಂದ ವಂಚಿಸಿರು ವುದೂ ನನಗೆ ತಿಳಿದಿದೆ.

ಗೋವಿಂದರಾಯನ ಸ್ವಭಾವದ ಸೂಕ್ಷ್ಮತೆಗಳು ಹೇಗಿದ್ದವು ಎಂಬುದು ನಿಮಗೆ ತುಸು ಗೊತ್ತಿದೆ. ತನಗೆ ಬಂದ ಪತ್ರದ ಕಾಗದಗಳಲ್ಲಿ ಖಾಲಿ ಜಾಗೆ ಇದ್ದರೆ ಅದನ್ನು ಬಳಸಬೇಕು ಎನ್ನುವಂಥ ಮನೋವೃತ್ತಿ ಈತನದು.

ಅಗತ್ಯದ ವಸ್ತುವನ್ನು ಅನಗತ್ಯಗೊಳಿಸಬಾರದು ಎನ್ನುವುದು ಈತನ ನಿಲುವು. ಹೀಗೆಯೇ ತಾನು ನನ್ನ ಮೂಲಕ ಪ್ರಕಟಗೊಳಿಸಿದ ಪುಸ್ತಕಗಳಿಗೆ ನಿಗದಿಗೊಳಿಸುತ್ತಿದ್ದ ಬೆಲೆಯೂ ಅಷ್ಟೆ. ಓದುಗರಿಗೆ ಕೊಳ್ಳಬೇಕೆನ್ನುವಂತೆ, ಹೊರೆಯಾಗಬಾರದು ಅನ್ನೋ ಹಾಗೆ ಮುದ್ರಣಕ್ಕೆ ಬಿದ್ದ ಖರ್ಚಿಗೆ ಮತ್ತೆ ಸೇರೋದನ್ನೆಲ್ಲ ಮೊದಲೇ ನಿಷ್ಕರ್ಷಿಸಿ ಸರಿಯಾದ ಬೆಲೆ ಅಚ್ಚಿಸುತ್ತಿದ್ದ. ಮೊದಲೇ ಬೆಲೆ ಹೆಚ್ಚಿಟ್ಟು ಆಮೇಲೆ ಚೌಕಾಸಿ ವ್ಯಾಪಾರದ ಹಾಗೆ ರಿಯಾಯತಿ ಬೆಲೆ ಕೊಡೋದಕ್ಕೆ ಗೋವಿಂದರಾಯ ಮೊದಲಿನಿಂದಲೂ ಕಟ್ಟಾ ವಿರೋಧಿಯಾಗಿದ್ದ.

'ಮೊದಲು ಬೆಲೆ ಜಾಸ್ತಿ ಹೇಳಿ ಆಮೇಲೆ ಕಡಿಮೆ ಮಾಡ್ತಾ ಬರೋದು ಎಂದರೆ ಹರಾಜಿನ ಕ್ರಮವೇ ಪುಸ್ತಕದ ವ್ಯಾಪಾರದ್ದು? ಒಂದು ಸಾರಿ ಒಂದು ಬೆಲೆಯು ಅದರಲ್ಲಿ ಮುದ್ರಿಸಿದ ಮೇಲೆ ಅದೇ ಅದರ ಬೆಲೆ. ಆ ಬೆಲೆಯನ್ನು ಕಡಿಮೆ ಮಾಡಿ ಅಂದರೆ, ಅದರಲ್ಲಿ ಅಚ್ಚಿಸಿರೋ ಬೆಲೆಗೆ ಬೆಲೆಯಿಲ್ಲ ಅಂತ ಅರ್ಥವೇ?!...' ಎಂದು ಅವನ ವಾದ. ಈ ವಿಷಯದಲ್ಲಿ ಬಹಳ ಜನ ಗೋವಿಂದರಾಯನ ಹತ್ತಿರ ನನ್ನ ಭಂಡಾರದೊಳಗೆ ಮಾತಾಡಿದ್ದಾರೆ. ಕೆಲವರು ಗೋವಿಂದರಾಯ ಎಲ್ಲವನ್ನೂ ಬಿಡಿಸಿ ಹೇಳಿದಾಗ ಒಪ್ಪಿಕೊಳ್ಳೋರು. ಕೆಲವರು 'ಈ ಮನುಷ್ಯ ಏನು ಇಂಥವನು?' ಅಂದುಕೊಂಡು ಹೋಗೋರು. ಹ್ಞಾಂ! ನನ್ನ ಹತ್ತಿರ ಬರತಿದ್ದೋರಲ್ಲಿ 'ಭಾಳ ದಿವಸದಿಂದ ಈ ಪುಸ್ತಕಾ ಹುಡುಕ್ತಾ ಇದೀನಿ. ಎಲ್ಲೂ ಸಿಕ್ಕಿಲ್ಲ. ನಿಮ್ಮ ಹತ್ತಿರ ಇದೆಯಾ?' ಅಂತ ಬರ್‍ತಿದ್ದೋರೇ ಜಾಸ್ತಿ. ಇಂಥವನ್ನು ಗೋವಿಂದರಾಯ ಹೇಗೋ ಅವರಿಗೆ ಒದಗಿಸುತ್ತಿದ್ದ. ಆಗ ಅವರಿಗೆ ಆಗುತಿದ್ದ ಸಂತೋಷ ಕಂಡು ನಾನು ಖುಷಿಯಲ್ಲಿ ಬೀಗತಿದ್ದೆ ಮತ್ತು ನಾನು ಮೊದಲಿನಿಂದಲೂ ಕನ್ನಡ ಕೃತಿಗಳನ್ನು ಮಾರಾಟಕ್ಕೆ ನನ್ನಲ್ಲಿ ಇರಿಸಿಕೊಳ್ಳುತ್ತ ಬಂದಿದೀನಿ. ಕನ್ನಡ ಕೃತಿಗಳನ್ನು ಮಾತ್ರ ನನ್ನಿಂದ ಪ್ರಕಟಗೊಳಿಸೋದಕ್ಕೆ ಮೀಸಲಾಗಿದ್ದೀನಿ. ಇಂಥ ಕನ್ನಡತನಕ್ಕೆ

ಕಟ್ಟುಬಿದ್ದಿರೋದರಿಂದಲೇ ನಾನು ಬೇರೆಲ್ಲರಿಗಿಂತ ಬೇರೆಯಾಗಿಯೇ ಉಳಿದಿದ್ದೀನಿ. ಪುಸ್ತಕ ಮಾರಾಟ ನನ್ನಲ್ಲಿ ನಿತಾಂತವಾಗಿ ನಡೀತಿದ್ರೂ ಪುಸ್ತಕ ಪ್ರಕಾಶನ ಮಾತ್ರ ಹಾಗಿರಲಿಲ್ಲ. ವೈದ್ಯ ಎಂ. ಗೋಪಾಲಕೃಷ್ಣರಾಯರ ಪುಸ್ತಕಗಳನ್ನು ಪುನರ್ಮುದ್ರಿಸುತ್ತಿದ್ದೆ. ಏನೇ ಆಗಲಿ, ಈ ನನ್ನ ೬೦-೬೨ ವರ್ಷದ ಬಾಳುವೆಯಲ್ಲಿ ಎಷ್ಟೊಂದು ಪುಸ್ತಕಗಳನ್ನ ಹೊರತಂದಿದ್ದೇನಲ್ಲ ಎಂದು ನನಗೇ ಆಶ್ಚರ್ಯವಾಗ್ತದೆ. ನಾನೇ ಅವುಗಳನ್ನು ಮಾರಾಟ ಮಾಡ್ತಿದ್ದೇನಲ್ಲವೆ!? ಬಹುತರ ಎಲ್ಲಾ ಪ್ರಕಟಣೆಗಳ ಪ್ರತಿಗಳು ಬೇಗ ಬೇಗ ತೀರಿಹೋಗುತ್ತಿದ್ದವು. ಜನ ಬಂದು ಕೇಳ್ತಾವ್ರು, 'ಪ್ರತಿ ಇಲ್ಲ? ಯಾಕೆ ಪುನರ್ಮುದ್ರಿಸೋದಿಲ್ಲ?' ಅಂತ ಗದರಿಸುವವರೂ ಇರತಿದ್ರು. ಅವರಿಗೆ ನಮ್ಮ ಗೋವಿಂದರಾಯರ ಸಂಕಷ್ಟ ತಿಳಿಯದು. ಅಲ್ರೀ, ಪುಸ್ತಕವೊಂದನ್ನು ಹೊರತರಲಿಕ್ಕೆ ದೊಡ್ಡ ಇಡುಗಂಟು ಬ್ಯಾಂಕಿನಲ್ಲಿ ಇರಬೇಕು. ಅದಲ್ಲದೆ ಅದನ್ನು ಪ್ರೆಸ್ಸಿಗೆ ಕೊಟ್ಟು, ಪ್ರೂಫ್ ನೋಡೋದು, ಇತರ ಕೆಲಸಗಳಿಗೆ ಓಡಾಡಲಿಕ್ಕೆ ಜನಾ ಬೇಕು–ತಿಂಗಳುಗಟ್ಟಲೆ ಯಾರು ಮಾಡಬೇಕು? ಗೋವಿಂದರಾಯರೇ ಅಂತೀರಾ? ಪುಸ್ತಕ ಮಾರಾಟಕ್ಕೆ ಧಡಬಡಿಸಬೇಕು. ಬಂಧುಬಳಗದವರ, ಇತರ ಸ್ನೇಹಿತರ ಅನುವು–ಆಪತ್ತಿಗೆ ಒದಗಬೇಕು. ಎಲ್ಲಾನೂ ಒಬ್ಬನೇ ಮಾಡೋದು ಹೇಗೆ ಸಾಧ್ಯ?

ಪುಸ್ತಕ ಮಾರಾಟದ ಬಗ್ಗೆ ನನ್ನ ಸ್ಪಷ್ಟ ಅಭಿಪ್ರಾಯ ಹೇಳಲೇಬೇಕು.

ಕನ್ನಡ ಪುಸ್ತಕಗಳನ್ನು ಕೊಂಡು ಓದುವವರಿಲ್ಲ–ಅನ್ನೋ ಮಾತನ್ನು ನೀವು ಕೇಳಿಯೇ ಇದ್ದೀರಿ. ನನ್ನ ಇತರ ಪುಸ್ತಕ ಮಾರಾಟದ ಬಂಧುಗಳ ಅನುಭವ ಈ ವಿಷಯಕ್ಕೆ ಏನಿದೆಯೋ ಗೊತ್ತಿಲ್ಲ. ಇಷ್ಟು ಮಾತ್ರ ನಿಜ, ನಮ್ಮ ಗೋವಿಂದರಾಯರ ಜೀವನೋಪಾಯಕ್ಕೆ ನಾನೇ, ನಾನೊಬ್ಬನೇ ಆಧಾರ. ಸರಿಯೇ. ಆದರೆ ೧೪–೧೫ ಜನ ಎಳೆಯರ ವಿದ್ಯಾಭ್ಯಾಸ, ಮದುವೆ, ಮುಂತಾಗಿ ಎಲ್ಲವನ್ನೂ ನಿಭಾಯಿಸತಿದ್ದನಲ್ಲ ನನ್ನ ಗಳಿಕೆಯಿಂದ? ಅದೂ ಪ್ರಾಮಾಣಿಕ ರೀತಿಯಲ್ಲಿ ವ್ಯವಹಾರ ಮಾಡುತ್ತ? ನಾನು ಹೇಳುವುದಿಷ್ಟೇ. ಪ್ರಯತ್ನಪಟ್ಟರೆ ಕನ್ನಡ ಪುಸ್ತಕಗಳ ಮಾರಾಟ ಸರ್ವಥಾ ನಿರಾಶಾದಾಯಕವಲ್ಲ. ಹಾಂ. ಈ ಸಂದರ್ಭದಲ್ಲಿ ಒಂದು ಮಾತನ್ನು ಕೃತಜ್ಞತೆಯಿಂದ ಇಲ್ಲಿ ದಾಖಲಿಸಬೇಕು. ಈ ರೀತಿ ಪುಸ್ತಕ ಕೇಳಿಕೊಂಡು ನನ್ನಲ್ಲಿಗೆ ಬಂದ ಪುಸ್ತಕ ಪ್ರೇಮಿಗಳು ಹೆಚ್ಚಾಗಿ ಉತ್ತರ ಕರ್ನಾಟಕದವರು. ಬೆಂಗಳೂರಿಗೆ ನಾನು ಬಂದಮೇಲೂ ಅವರು ನನ್ನಲ್ಲಿಗೆ ಬರ್ತಾನೇ ಇದ್ದಾರೆ.

ಇಲ್ಲೀ ತನಕ ನಾನು ಭೈರಪ್ಪ ಎಂಬುವರ ಹೆಸರು ಎತ್ತದೆ ಇರೋದು ನಿಮಗೆ ಆಶ್ಚರ್ಯ ತರಿಸಿರಬಹುದು ಅಲ್ಲವೇ? ನನ್ನಿಂದ ಭೈರಪ್ಪಗೆ ಹೆಸರು ಬಂತೋ? ಇಲ್ಲವೆ ಭೈರಪ್ಪನಿಂದ ನನಗೆ ಹೆಸರು ಬಂತೋ? ನನ್ನ ಪ್ರಕಾರ ಕೋಳಿಯಿಂದ ಮೊಟ್ಟೆ ಬಂತೋ? ಮೊಟ್ಟೆಯಿಂದ ಕೋಳಿ ಬಂತೋ ಅಂತ ಕೇಳಿದ ಹಾಗೆ ಈ ಪ್ರಶ್ನೆ. ನಿಮಗೆ ಆಶ್ಚರ್ಯ ಅನ್ನಿಸಬಹುದು ಭೈರಪ್ಪನಂಥ ಲೇಖಕನ ಜೊತೆ ಗೋವಿಂದರಾಯ ಯಾವ ಕಾಗದ ಪತ್ರಗಳ ಮುಖಾಂತರವೂ ಒಪ್ಪಂದ ಮಾಡಿಕೊಳ್ಳಲಿಲ್ಲ. ಇಬ್ಬರೂ ಮಾತಾಡಿಕೊಂಡ ಮಾತಿನ ನಂಬಿಕೆಯೇ ಅವರನ್ನು ಬಾಂಧವ್ಯಕ್ಕಿಂತ ಮಿಗಿಲಾಗಿ ಬೆಸೆಯಿತು. ಇದು ಬರಿಯ ವ್ಯಾವಹಾರಿಕ ಸಂಬಂಧವಾಗಿ ಉಳಿಯದೆ ಒಬ್ಬರ ಕಷ್ಟ, ಸುಖಕ್ಕೂ ಇನ್ನೊಬ್ಬರು ಆಗೋ ಅಂಥ ಭಾವನೆಯನ್ನು ಬೆಳೆಸಿತು.

ಭೈರಪ್ಪನಂಥ ಅಂತಸ್ಸತ್ವವುಳ್ಳ ಲೇಖಕನನ್ನು ಹೊಂದಿರುವುದು ನನಗೆ ಹೆಮ್ಮೆಯ ಸಂಗತಿಯಾಗಿದೆ. ಹೀಗೆಯೇ ನನ್ನಿಂದ ಪ್ರಕಟಗೊಂಡಿರುವ ಲೇಖಕರಲ್ಲಿ ಜಿ.ಪಿ. ರಾಜರತ್ನಂ, ಶಂಕರಮೊಕಾಶಿ ಪುಣೇಕರ, ಶೇಷನಾರಾಯಣ, ಎಂ.ಎಸ್.ಕೆ. ಪ್ರಭು, ಜಿ.ಎಸ್. ಶಿವರುದ್ರಪ್ಪ, ಎಚ್.ಎಸ್. ಶಿವಪ್ರಕಾಶ ಅವರಂಥ ಲೇಖಕರೆಲ್ಲ ಸೇರಿದ್ದಾರೆ.

ಒಂದು ಸಲ ಮರುಮುದ್ರಣಗೊಂಡಿದ್ದ ಕಾದಂಬರಿಯೊಂದರ ಸಂಬಂಧ ಭೈರಪ್ಪನಿಗೆ ರಾಯಧನ ತಲುಪಿಲ್ಲ ಅಂತ ಕಂಡುಬಂದ ಈ ಗೋವಿಂದರಾಯ ಪೇಚಾಡಿಕೊಂಡು ಆಗ ಆದ ತಪ್ಪು ಸರಿಪಡಿಸಿಕೊಳ್ಳೋವರೆಗೂ ಒಳಗೇ ಒದ್ದಾಡಿಕೊಂಡದ್ದು ನನಗೆ ಈ ಮನುಷ್ಯನ ಪ್ರಾಮಾಣಿಕತೆ ಬಗ್ಗೆ ಹೆಮ್ಮೆ ತರಿಸ್ತು. ತನ್ನ ವ್ಯವಹಾರದ ಲೆಕ್ಕಪತ್ರಗಳನ್ನು ಎಂದೂ ಸುಳ್ಳು ಬರೆಯದೆ, ಎರಡೆರಡು ಖಾತೆ ಪುಸ್ತಕ ಇಡದ ಈ ಮನುಷ್ಯ ಟ್ಯಾಕ್ಸ್ ಆಫೀಸ್‌ಗೆ ವಾರ್ಷಿಕ ಲೆಕ್ಕಪತ್ರಗಳನ್ನು ತಗೊಂಡು ಹೋದರೆ ಅಲ್ಲಿನ ಅಧಿಕಾರಿ ಮೊದಲುಗೊಂಡು ಎಲ್ಲರೂ ಈ ಮಹರಾಯನಿಂದ ತಮಗೆ ಮೇಲು ಸಂಪಾದನೆ ಆಗೋ ಅಂಥದೇನೂ ಇಲ್ಲ ಅಂತ ತಿಳಿದು ಲೆಕ್ಕಪತ್ರಗಳಿಗೆ ತಮ್ಮ ಮುದ್ರೆ ಒತ್ತುತ್ತಿದ್ದರು.

ಗೋವಿಂದರಾಯ ಬೆಂಗಳೂರಿನಲ್ಲಿ ಮದುವೆಯಾಗಿ ಪುಸ್ತಕಗಳ ಮುದ್ರಣಕ್ಕೆ, ವ್ಯವಹಾರಕ್ಕೆ, ಬಾಂಧವ್ಯಕ್ಕೆ ಬೆಂಗಳೂರಿನ ಒಡನಾಟವನ್ನು ಹೆಚ್ಚಿಸಿಕೊಂಡಾಗ ಹುಬ್ಬಳ್ಳಿಯಲ್ಲಷ್ಟೇ ಒಂದು ಮೈ ಪಡೆದಿದ್ದ ನಾನು ಬೆಂಗಳೂರಿನಲ್ಲಿಯೂ ಮತ್ತೊಂದು ಮೈ ಪಡೆದೆ. ೧೯೬೮ರ ವಿಜಯ ದಶಮಿಯಂದು ರಾಷ್ಟ್ರೀಯ ವಿದ್ಯಾಲಯ ಬೀದಿಯಲ್ಲಿ ಪಡೆದುಕೊಂಡ ಈ ಎರಡನೇ 'ಭಂಡಾರದ ಮೈ ಆಮೇಲೆ ಅಲ್ಲಿಂದ ೧೯೭೦ನೆಯ ವರ್ಷದಲ್ಲಿ ಬಳೇಪೇಟೆ ಜಂಗಮಮೇಸ್ತ್ರಿ ಗಲ್ಲಿಗೆ ಬಂದು ನಿಂತಿದೆ. ನನ್ನ ಎರಡನೇ ಮೈಯನ್ನು ಗೋವಿಂದರಾಯ ಮತ್ತು ಈತನ ಮಕ್ಕಳು ಕಾಪಿಡುತ್ತಿದ್ದಾರೆ. ಕೃತಿಗಳು ನನ್ನಲ್ಲಿಗೆ ಬಂದು ಮೈದುಂಬಿಕೊಳ್ಳುತ್ತಲೇ ಇದೆ. ಮೈಸೂರು, ಬೆಂಗಳೂರು, ಮಂಗಳೂರು, ಧಾರವಾಡದಂಥ ಕೇಂದ್ರಗಳಿಂದ ಅದೆಷ್ಟೊಂದು ನನ್ನ ಸಮವಂದಿಗರ ಪ್ರಕಟಣೆಗಳೂ ನನ್ನಲ್ಲಿ ಓದುಗರಿಗೆ ತಲುಪುತ್ತಿವೆ...

ಇವು ನನ್ನ ಹೆಸರಿನಿಂದ ಪ್ರಕಟವಾದ ಕೃತಿಗಳು:

| | | | |
|---|---|---|---|
| 1. | ಸೇನಾಪತಿ ಡಾ॥ ಹರ್ಡೀಕರರು | ರಾ.ವೆ. ಕರಿಗುದರಿ | 1934 |
| 2. | ಹುಚ್ಚಾಟಗಳು | ದ.ರಾ. ಬೇಂದ್ರೆ | 1935 |
| 3. | ಬೆಳುದಿಂಗಳು | ಜಿ.ಪಿ. ರಾಜರತ್ನಂ | 1936 |
| 4. | ಪರಿವರ್ತನೆ | ಎಚ್. ರಾಮರಾವ್ | 1937 |
| 5. | ದೇವದಾಸ | ಶರಶ್ಚಂದ್ರ ಚಟ್ಟೋಪಾಧ್ಯಾಯ | 1939 |
| 6. | ಮಗಳಿಗೆ ತಂದೆಯ ಓಲೆಗಳು | ಜವಾಹರಲಾಲ್ ನೆಹರು | 1941 |
| 7. | ಅಕ್ಕ ತಂಗಿ | ನಾರಾಯಣ ಸಂಗಮ | 1943 |
| 8. | ಕಾಶೀನಾಥ | ಶರಶ್ಚಂದ್ರ ಚಟ್ಟೋಪಾಧ್ಯಾಯ | 1943 |
| 9. | ವೃಂದಾವನ | " | 1943 |
| 10. | ಅಕ್ಕಾಜಿ | " | 1944 |
| 11. | ಅರಗಿನ ಮನೆ | " | 1944 |
| 12. | ಕಾಬೂಲಿವಾಲಾ | ರವೀಂದ್ರನಾಥ ಠಾಕೂರ್ | 1945 |

| | | | |
|---|---|---|---|
| 13. | ಮಕ್ಕಳ ಬಸವಣ್ಣನವರು | ಬೆಟಗೇರಿ ಕೃಷ್ಣಶರ್ಮ | 1946 |
| 14. | ಭಾರತದಿಂದ ತೊಲಗಿರಿ | ಗಾಂಧೀಜಿ | 1947 |
| 15. | ಸಾಮ್ಯವಾದವೇ ಏಕೆ? | ಜಯಪ್ರಕಾಶ್ ನಾರಾಯಣ | 1947 |
| 16. | ಭಾರತೀಯ ಘಟನಾ ಸಮಿತಿ | ನಾರಾಯಣ ಶರ್ಮ | 1947 |
| 17. | ಸಂಸಾರಚಿತ್ರ | ಆನಂದಕಂದ | 1947 |
| 18. | ಸಂಪಿಗೆ | ಕುಲಕರ್ಣಿ ಶ್ರೀನಿವಾಸ | 1947 |
| 19. | ಕ್ರಾಂತಿ ಪಥದಲ್ಲಿ | ಜಯಪ್ರಕಾಶ್ ನಾರಾಯಣ | 1947 |
| 20. | ವರ್ಧಾ ಶಿಕ್ಷಣ ಯೋಜನೆ | ಝಕೀರ್ ಹುಸೇನ್ ವರದಿ | 1947 |
| 21. | ಹಾಳುಮನೆ ಮತ್ತು ಪುತ್ರಯಜ್ಞ | ರವೀಂದ್ರನಾಥ ಠಾಕೂರ್ | 1947 |
| 22. | ಮಕ್ಕಳ ಮಹಾತ್ಮಾ ಗಾಂಧಿ | ಸೂರ್ಯನಾರಾಯಣ ಶರ್ಮ ಮತ್ತು ಹೊಯ್ಸಳ | 1948 |
| 23. | ಬೋಧಾಮೃತ | ಶ್ರೀರಾಮಕೃಷ್ಣ ಪರಮಹಂಸ | 1948 |
| 24. | ಭರತಖಂಡದ ಜೀವಜ್ಯೋತಿಗಳು | ಹೊಸಕೆರೆ ಚಿದಂಬರಯ್ಯ | 1949 |
| 25. | ಮಂಗಲಪ್ರಭಾತ | ಗಾಂಧೀಜಿ | 1949 |
| 26. | ನನ್ನ ಆರಂಭ ಜೀವನ | ” | 1949 |
| 27. | ಚಂದ್ರನಾಥ | ಶರಚ್ಚಂದ್ರ ಚಟ್ಟೋಪಾಧ್ಯಾಯ | 1950 |
| 28. | ಗಾಂಧೀ ವಿಚಾರದೋಹನ | ಕಿಶೋರ್‌ಲಾಲ್ ಮಶ್ರುವಾಲಾ | 1951 |
| 29. | ಆರ್ಯಧರ್ಮ ಪ್ರದೀಪ | ಹೊಸಕೆರೆ ಚಿದಂಬರಯ್ಯ | 1951 |
| 30. | ಕರ್ಮಯೋಗ | ಸ್ವಾಮಿ ವಿವೇಕಾನಂದ | 1952 |
| 31. | ಬಾಳಿನ ಗಿಡ | ಎಂ. ಹರಿದಾಸರಾವ್ | 1954 |
| 32. | ನವ ವಿಧಾನ | ಶರಚ್ಚಂದ್ರ ಚಟ್ಟೋಪಾಧ್ಯಾಯ | 1954 |
| 33. | ಗೋದಾನ | ಪ್ರೇಮಚಂದ್ | 1956 |
| 34. | ಸಾಹಿತ್ಯದ ಹಿನ್ನೆಲೆ | ಕೆ. ವೆಂಕಟರಾಯಾಚಾರ್ಯ | 1957 |
| 35. | ಮದುವೆಯ ಪತ್ತಲ ಮತ್ತು ಇತರ ನಗೆಯಾಟಗಳು | ಬೇಂದ್ರೆ ಲಕ್ಷ್ಮಣರಾವ್ | 1957 |
| 36. | ಸತಿವಿರಾಜ್ | ಶರಚ್ಚಂದ್ರ ಚಟ್ಟೋಪಾಧ್ಯಾಯ | 1958 |
| 37. | ಕುಟುಂಬ ಯೋಜನೆ | ಕೆ. ಆರ್. ಉಡುಪ | 1958 |
| 38. | ನಮ್ಮ ಮನಸ್ಸು | ಕೆ. ವಾರಿಜಾ ಉಡುಪ | 1959 |
| 39. | ಇಂದಿನ ವಿಜ್ಞಾನ ಮತ್ತು ನೀವು | ಲಿನ್‌ಪೂಲ್ | 1959 |
| 40. | ವಿಮರ್ಶೆಯ ಸ್ವರೂಪ | ಮಿರ್ಜಿ ಅಣ್ಣಾರಾವ್ | 1959 |
| 41. | ಕವಿಲಕ್ಷ್ಮೀಶನ ಶಬ್ದಾಲಂಕಾರ ವೈಭವ | ರಾ.ನ. ಮಳಗಿ | 1960 |
| 42. | ಧರ್ಮಶ್ರೀ | ಎಸ್.ಎಲ್. ಭೈರಪ್ಪ | 1961 |
| 43. | ಒಂದು ಕತ್ತೆಯ ಆತ್ಮಕಥೆ | ಕೃಷ್ಣಚಂದ್ರ | 1961 |
| 44. | ಕನ್ನಡ ಗಂಗಾಲಹರಿ | ಪಂಡಿತ ಜಗನ್ನಾಥ | 1962 |
| 45. | ದೂರಸರಿದರು | ಎಸ್.ಎಲ್. ಭೈರಪ್ಪ | 1962 |
| 46. | ನಾನೇ ನಾನು ಮತ್ತು ಇತರ ಏಕಾಂಕಗಳು | ಬೇಂದ್ರೆ ಲಕ್ಷ್ಮಣರಾವ್ | 1963 |
| 47. | ಕತ್ತೆಯ ಉತ್ತರ ರಾಮಾಯಣ | ಕೃಷ್ಣಚಂದ್ರ | 1964 |

| | | | |
|---|---|---|---|
| 48. | ಸುವರ್ಣ ಸಂಪದ | ಮಾಲತೀ ದಾಂಡೇಕರ್ | 1965 |
| 49. | ಮೋತೀಲಾಲ್ ಜವಾಹರ್‌ಲಾಲ್ ನೆಹರು | ಬಿ.ಆರ್. ನಂದ | 1965 |
| 50. | ವಂಶವೃಕ್ಷ | ಎಸ್.ಎಲ್. ಭೈರಪ್ಪ | 1965 |
| 51. | ಕಥನ ಕಲೆ | ಗಜೇಂದ್ರಗಡ ಶಾಮರಾಯ | 1966 |
| 52. | ಸತ್ಯ ಮತ್ತು ಸೌಂದರ್ಯ | ಎಸ್.ಎಲ್. ಭೈರಪ್ಪ | 1966 |
| 53. | ಜಲಪಾತ | " | 1967 |
| 54. | ನವವಧು | ಪೂರ್ಣಪ್ರಜ್ಞ | 1967 |
| 55. | ಸಾಹಿತ್ಯ ಮತ್ತು ಪ್ರತೀಕ | ಎಸ್.ಎಲ್. ಭೈರಪ್ಪ | 1967 |
| 56. | ಕಾರಣ ಪುರುಷ | ರಂ. ಶ್ರೀ. ಮುಗಳಿ | 1967 |
| 57. | ನಾಯಿ–ನೆರಳು | ಎಸ್.ಎಲ್. ಭೈರಪ್ಪ | 1968 |
| 58. | ಸಾವಧಾನ | ದ.ಬಾ. ಕುಲಕರ್ಣಿ | 1968 |
| 59. | ತಬ್ಬಲಿಯು ನೀನಾದೆ ಮಗನೆ | ಎಸ್.ಎಲ್. ಭೈರಪ್ಪ | 1968 |
| 60. | ಎರಡು ಉಂಗುರ | ಶೇಷನಾರಾಯಣ | 1969 |
| 61. | ಭಾವತೀರ್ಥ | ಡಿ.ಎಸ್. ಕರ್ಕಿ | 1970 |
| 62. | ನಕ್ಷತ್ರ ಗಾನ | " | 1970 |
| 63. | ಇನ್ನಿಲ್ಲದವರು | ಆರ್.ಡಿ. ಕಾಮತ್ | 1970 |
| 64. | ಮತದಾನ | ಎಸ್.ಎಲ್. ಭೈರಪ್ಪ | 1970 |
| 65. | ಕಥೆ ಮತ್ತು ಕಥಾವಸ್ತು | " | 1970 |
| 66. | ಗೃಹಭಂಗ | " | 1970 |
| 67. | ನಿರಾಕರಣ | " | 1971 |
| 68. | ಗ್ರಹಣ | " | 1972 |
| 69. | ಶಿಕ್ಷಣದ ಮುನ್ನಡೆ. | ರಂ.ಶ್ರೀ. ಮುಗಳಿ | 1972 |
| 70. | ಬಡವರ ವೈದ್ಯ: ೧ | ಎಂ. ಗೋಪಾಲಕೃಷ್ಣರಾವ್ | 1973 |
| 71. | ದಾಟು | ಎಸ್.ಎಲ್. ಭೈರಪ್ಪ | 1973 |
| 72. | ಜೀವಂತ ಧೋರಣೆಗಳು | ಮಾಧವ ಕುಲಕರ್ಣಿ | 1974 |
| 73. | ಸ್ಮೃತಿ | ಎನ್. ಪ್ರಭಾಕರ್ | 1975 |
| 74. | ಪ್ರೇಮಕಲಾ | ಎಂ. ಗೋಪಾಲಕೃಷ್ಣರಾವ್ | 1975 |
| 75. | ಕಾಮದ ಗುಟ್ಟು | " | 1975 |
| 76. | ಅನ್ವೇಷಣ | ಎಸ್.ಎಲ್. ಭೈರಪ್ಪ | 1975 |
| 77. | ಗೃಹಿಣಿ | ಹೇಮಲತಾ ಪರಶುರಾಮ್ | 1976 |
| 78. | ಬಕ | ಎಂ.ಎಸ್.ಕೆ. ಪ್ರಭು | 1977 |
| 79. | ಉಪಯುಕ್ತ ಗಿಡಮೂಲಿಕೆಗಳು | ಎಂ. ಗೋಪಾಲಕೃಷ್ಣರಾವ್ | 1978 |
| 80. | ರಾಜಾಜಿ | ಪಿ.ಎಸ್. ಶ್ರೀಧರಮೂರ್ತಿ | 1978 |
| 81. | ಸಹಸ್ಪಂದನ | ಸಂ॥ ಮಾಧವ ಕುಲಕರ್ಣಿ ಮತ್ತು ಮ. ಗೋವಿಂದರಾವ್ | 1979 |
| 82. | ಸುನಂದಾಭಿನಂದನ | ಸಂ॥ ಎಚ್.ಎಸ್. ಪಾರ್ವತಿ ಮತ್ತು ಸೂ. ಸುಬ್ರಹ್ಮಣ್ಯಂ | 1979 |

# ಶ್ರೇಷ್ಠ ಪುಸ್ತಕೋದ್ಯಮಿ: ಮ. ಗೋವಿಂದರಾವ್

....ಅವರ ಪ್ರೀತಿ ವಿಶ್ವಾಸಗಳು ನನ್ನನ್ನು ಸಾಹಿತ್ಯ ಕ್ಷೇತ್ರದಲ್ಲಿ ಮುಂದುವರಿಯಲು ಕಾರಣಕರ್ತರಾದ ಹಲವಾರು ಮಹನೀಯರಲ್ಲಿ ಪರಿಗಣಿಸುತ್ತೇನೆ.

**–ಶಂಕರ ಮೊಕಾಶಿ ಪುಣೇಕರ**

....ಜೀವನದ ಮೌಲ್ಯಗಳು ಉಜ್ವಲವಾಗಿ ಹೊಳೆಯುತ್ತಿದ್ದ ಕಾಲವನ್ನು ಕಂಡ ಮಂಗಳೂರು ಗೋವಿಂದರಾಯರು ಅವು ನಶಿಸುವುದನ್ನೂ ಕಂಡರೆಂಬುದು ಒಂದು ವಿಪರ್ಯಾಸ! ಕಾಲದ ಮಹಿಮೆ! ಆದರೆ, ಹಾಗಾಗಬೇಕಿಲ್ಲ ಎಂಬುದಕ್ಕೆ ಸ್ವತಃ ಅವರೇ ಒಂದು ಸಾಕ್ಷಿಯಾಗಿದ್ದರು!

**–ಹಾ.ಮಾ. ನಾಯಕ**

....ಗೋವಿಂದರಾಯರ ಪ್ರಸ್ತಾಪ ಬಂದಾಗಲೆಲ್ಲ ನನಗೆ ನನ್ನ ತಂದೆಯ ನೆನಪು ಬರುವುದು ಎಂಥ ಯೋಗಾಯೋಗ!

**–ಹಾ.ವೆಂ. ನಾಗೇಶ**

....ಅಂಗಡಿ, ಪ್ರಕಾಶನದ ಕೆಲಸಗಳಲ್ಲಿ ಅವರಿಗಿದ್ದ 'ಕಠೋರ ಶ್ರದ್ಧೆ', ವಾಸ್ತವ ಪ್ರಜ್ಞೆ, Uptodateತನಗಳಿಂದ ನಮ್ಮ ದೊಡ್ಡಪ್ಪ ತುಂಬ ಅಪರೂಪದ ವ್ಯಕ್ತಿಯಾಗಿ ನನಗೆ ಕಾಣುತ್ತಾರೆ.

**–ಎಂ.ಎ. ಸುಬ್ರಹ್ಮಣ್ಯ**

....ಶ್ರೀ ಗೋವಿಂದರಾಯರೊಡನೆ ವ್ಯವಹಾರದಲ್ಲಿ ನನಗೆಂದೂ ಗೊಂದಲ ಮೂಡಲಿಲ್ಲ. ಇಂದು ಅದೇ ನನಗೊಂದು ಕೊರತೆಯಾಗಿ ಕಾಣುತ್ತಿದೆ. ಬೇಡಿಕೆ, ಬಿಲ್ಲು, ರಸೀದಿಗಳಿಂದ ಹೊರಗೆ ರಾಯರನ್ನು ಭೇಟಿಯಾಗುವ, ಮಾತಾಡುವ, ಕನಿಷ್ಠ ಪತ್ರವ್ಯವಹಾರ ನಡೆಸುವ ಅವಕಾಶವೇ ನನಗೊದಗಲಿಲ್ಲ.

**–ಜಿ.ಎನ್. ಅಶೋಕವರ್ಧನ**

....ವಯಸ್ಸಿನಿಂದ ಮಾತ್ರವಲ್ಲ, ಭಾವನಾತ್ಮಕವಾಗಿ ಅವರು ನನಗೆ ಹಿರಿಯರಾಗಿದ್ದರು. ಕೆಲವು ಗಟ್ಟಿಮೌಲ್ಯಗಳ ಜೀವಂತ ಪ್ರತ್ಯಕ್ಷವಾಗಿದ್ದರು. ನನಗೂ ಸಾವಿಗೂ ನಡುವಣ ಮರೆಯಾಗಿದ್ದರು. ಅವರು ಹೋದ ಅನಂತರ ಆತ್ಮೀಯ ವರ್ತುಲದಲ್ಲಿ ನನಗೆ ಹಿರಿಯರೆಂದು ನಾನು ಭಾವಿಸ ಬಹುದಾದ ಬೇರಾವ ವ್ಯಕ್ತಿಯೂ ಇಲ್ಲ. ಆ ನಡುವಣ ಮರೆಯು ಹೊರಟುಹೋಗಿ ಇನ್ನು ನಾನೇ ಹಿರಿಯ ಎಂಬ ಸರದಿಯ ಭಾವನೆಯು ತುಂಬಿಕೊಂಡಿತು.

**–ಎಸ್.ಎಲ್. ಭೈರಪ್ಪ**

**ಸಾಹಿತ್ಯ ಭಂಡಾರ ಬಳೇಪೇಟೆ ಬೆಂಗಳೂರು: ೫೩**

ರೂ. ೧೮/-